



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 41

| ಸಂಪುಟ: ೦೫ ಸಂಚಿಕೆ: ೩ | ಜೂನ್ ೨೦೧೮ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 05 Issue 3 | June 2018 | Pages - 8 | A. Sub. - Rs. 20/- | Editor : Sri. B.R. Ravindranath |




**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–
ಐದು ವರ್ಷಗಳ ಚಂದಾ
ರೂ. ೧೦೦/–

ವಿಳಾಸ

ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ

## ಹಳಗನ್ನಡ ಡಿಪ್ಲೊಮ ವಿದ್ಯಾರ್ಥಿಗಳಿಗೆ ಪ್ರಮಾಣಪತ್ರ ವಿತರಣೆ

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಮೇ ೧೯, ೨೦೧೮ರ ದಿನವು ಒಂದು ಐತಿಹಾಸಿಕ ದಿನವೆನ್ನುವುದೇ ಸೂಕ್ತ. ಆರು ತಿಂಗಳ, ಮೊದಲನೇ ಹಳಗನ್ನಡ ಡಿಪ್ಲೊಮ ತರಗತಿಗಳು ಯಶಸ್ವಿಯಾಗಿ ಅಂತ್ಯಗೊಂಡು, ವಿದ್ಯಾರ್ಥಿಗಳು ಬಹಳ ಸಂಭ್ರಮದಿಂದ ತಮ್ಮ ಪ್ರಮಾಣ ಪತ್ರಗಳನ್ನು ಸ್ವೀಕರಿಸಿದ ಅವಿಸ್ಮರಣೀಯ ಘಳಿಗೆ.ಪ್ರತಿಷ್ಠಾನಕ್ಕೆ ಮತ್ತು ಅಧ್ಯಾಪಕ ವೃಂದಕ್ಕೆ ಒಂದು ಹೆಮ್ಮೆಯ ಮತ್ತು ಸಾಧನೆಯ ಸಾರ್ಥಕತೆ. ವಿದ್ಯಾರ್ಥಿಗಳಿಗೆ ತಾವುಗಳೇ ಈ ಡಿಪ್ಲೊಮ ತರಗತಿಯ ಮೊದಲ ವಿದ್ಯಾರ್ಥಿ ವೃಂದ ಎಂಬ ಹೆಗ್ಗಳಿಕೆ. ತರಗತಿಯ ವಿಶೇಷತೆ ಏನು? ಕಾಲೇಜು ವಿದ್ಯಾರ್ಥಿಗಳಿಂದ ಮೊದಲ್ಗೊಂಡು, ನಿವೃತ್ತ ಅಧ್ಯಾಪಕರು, ನಿವೃತ್ತ ಅಧಿಕಾರಿಗಳು, ಸಾಫ್ಟ್‌ವೇರ್ ಇಂಜನಿಯರ್ಸ್, ವ್ಯಾಪಾರಸ್ಥರು, ಕಲಾಕಾರರು ಮತ್ತು ಗೃಹಿಣಿಯರನ್ನೊಳಗೊಂಡ ಈ ವಿದ್ಯಾರ್ಥಿ ವೃಂದದಲ್ಲಿ ವಿವಿಧ ವಯೋಮಾನದವರು ಆಸಕ್ತಿ ಮತ್ತು ಶ್ರದ್ಧೆಯಿಂದ ವಾರದಲ್ಲಿ ಮೂರು ದಿನದ ಆರು ಘಂಟೆಗಳ ಕಾಲ ತರಗತಿಗಳಲ್ಲಿ ಪಾಲ್ಗೊಳ್ಳುತ್ತಿದ್ದ ರೀತಿ. ಇಂದು ಅವರೆಲ್ಲರೂ ತಮ್ಮ ಕುಟುಂಬ ವರ್ಗದವರೊಂದಿಗೆ (ಮಕ್ಕಳು, ಮೊಮ್ಮಕ್ಕಳು) ವೇದಿಕೆಏರಿ ಪ್ರಮಾಣ ಪತ್ರ ಸ್ವೀಕರಿಸಿದ ಕ್ಷಣಗಳನ್ನು ಯಾರೂ ಮರೆಯುವಂತಿಲ್ಲ.

ಪ್ರಖ್ಯಾತ ಕವಿಗಳು ಮತ್ತು ವಿದ್ವಾಂಸರಾದ ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯ ಅವರ ಅಧ್ಯಕ್ಷತೆ ಕಾರ್ಯಕ್ರಮಕ್ಕೆ ಮತ್ತಷ್ಟು ರಂಗೇರಿಸಿತ್ತು. ಈ ಸಮಾರಂಭವು ಸಹ ಹಳಗನ್ನಡ ತರಗತಿಯಾಗಿಯೇ ಮಾರ್ಪಾಡಾಗಿತ್ತು ಆದಿಪುರಾಣದ ನೀಲಾಂಜನೆಯ ನೃತ್ಯ ಪ್ರಸಂಗ, ಪಂಪಭಾರತದ ಭಾನುಮತಿಯ ಪ್ರಸಂಗಗಳನ್ನು ಅಡೆತಡೆಯಿಲ್ಲದೆ ವಾಚಿಸಿ, ವ್ಯಾಖ್ಯಾನಿಸಿ, ಎಲ್ಲರಿಗೂ ಅಚ್ಚರಿಮೂಡಿಸಿದರು. ತಮ್ಮ ೮೮ನೆಯ ವಯಸ್ಸಿನಲ್ಲೂ ಅವರ ಜ್ಞಾಪಕ ಶಕ್ತಿಯನ್ನು ಮೆಚ್ಚುವಂತದ್ದೇ. ಬಿ.ಎಂ.ಶ್ರೀ. ಪ್ರತಿಷ್ಠಾನದ ಹಳಗನ್ನಡ ಡಿಪ್ಲೊಮ ತರಗತಿಯ ಪಠ್ಯಗಳನ್ನು ನೋಡಿ, ಈ ವಿದ್ಯಾರ್ಥಿಗಳ ಸಾಧನೆ ಶ್ಲಾಘನೀಯವೆಂದೂ ಮತ್ತು ಹೀಗೆಯೇ ಮುಂದುವರೆಸಿಕೊಂಡು ಹೋಗಬೇಕೆಂದು ಪ್ರತಿಷ್ಠಾನದ ಅಧ್ಯಕ್ಷರಿಗೆ ಸಲಹೆ ನೀಡಿದರು.ಕರ್ನಾಟಕದ ಯಾವ ವಿಶ್ವವಿದ್ಯಾಲಯಗಳೂ ಹಳಗನ್ನಡಕ್ಕಾಗಿಯೇ ಡಿಪ್ಲೊಮ ತರಗತಿಗಳನ್ನು ನಡೆಸುತ್ತಿಲ್ಲವೆಂದು ತಿಳಿಸಿದರು. ಇದೇ ಸಂದರ್ಭದಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನವು ಡಿಎಲ್‌ಎನ್, ಆರ್.ನರಸಿಂಹಾಚಾರ್ಯ, ಕ.ವೆಂ.ರಾಘವಾಚಾರ್, ಎಂ.ವಿ.ಸೀ – ಗುರುಪಂಪರೆಯನ್ನೂ ಮತ್ತು ಅವರ ಸಾಧನೆಗಳನ್ನೂ, ಕೊಡುಗೆಗಳನ್ನೂ ಸ್ಮರಿಸಿದರು. ಹಳಗನ್ನಡ ಕವಿಗಳು "ಕಲ್ಲೊಳ್ ನಾರೆತ್ತುವರು" ಎಂಬ ನಾಣ್ನುಡಿಯಂತೆ ಕೆಲಸ ಮಾಡಿದವರು ಎಂದು ಶ್ಲಾಘಿಸಿದರು.

೪ನೇ ಪುಟಕ್ಕೆ



## ಸಂಪಾದಕೀಯ

ಕರ್ನಾಟಕದಲ್ಲಿ ಚುನಾವಣೆ ಪೂರ್ಣಗೊಂಡಿರುತ್ತದೆ. ಈ ಬಾರಿ ರಾಜ್ಯ ಮಟ್ಟದಲ್ಲಿ ದಾಖಲೆ ಗರಿಷ್ಟ ಮತದಾನವಾದರೂ ಕರ್ನಾಟಕ ರಾಜ್ಯದ ಆರ್ಥಿಕ, ಔದ್ಯಮಿಕ, ಸಾಮಾಜಿಕ ಹಾಗೂ ರಾಜಕೀಯ ಕೇಂದ್ರವಾದ ಬೆಂಗಳೂರಿನಲ್ಲಿ ಕನಿಷ್ಟ ಮತದಾನ ನಡೆದಿರುತ್ತದೆ. ಈ ವಿಷಯವನ್ನು ಬಹಳಷ್ಟು ಜನ ಬಹಳಷ್ಟು ರೀತಿಗಳಲ್ಲಿ ವಿಶ್ಲೇಷಿಸಿರುತ್ತಾರೆ. ಬಹುತೇಕವಾಗಿ ವಿದ್ಯಾವಂತರೇ ಇರುವ ಬೆಂಗಳೂರಿನಲ್ಲಿ ಬೇಜವಾಬ್ದಾರಿಯುತ ಮತದಾನ ನಡೆದಿದೆ ಎಂದೂ ಕೆಲವರು ಅಭಿಪ್ರಾಯಪಟ್ಟಿರುತ್ತಾರೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಮೂರು ರೀತಿಯ ಮತಗಳನ್ನು ನೀಡುವ ಅವಕಾಶಗಳಿರುತ್ತವೆ.

ಮೊದಲನೆಯದು ಸಕಾರಾತ್ಮಕ ಮತ.

ಎರಡನೆಯದು ನಕಾರಾತ್ಮಕ ಮತ ಅಂದರೆ ವಿರುದ್ದವಾಗಿ ನೀಡುವ ಮತ.

ಮೂರನೆಯದು ನಿರಾಸಕ್ತನಾಗಿರುವುದು.ಈ ಪದ್ದತಿಯನ್ನು ವಿಶ್ವಸಂಸ್ಥೆಯ ಮಟ್ಟದಿಂದ ಎಲ್ಲಾ ಔಪಚಾರಿಕ ಸಂಸ್ಥೆಗಳಲ್ಲಿ ಪಾಲಿಸಲಾಗುತ್ತಿದೆ.

ಭಾರತದಂತಹ ಬೃಹತ್ ದೇಶದಲ್ಲಿ ಸಾರ್ವತ್ರಿಕೆ ಚುನಾವಣೆಗಳನ್ನು ನಡೆಸುವುದು ಒಂದು ಬಹು ದೊಡ್ಡ ಸಾಧನೆ. ನಮ್ಮ ಚುನಾವಣೆಗಳಲ್ಲಿ ನಕಾರಾತ್ಮಕ ಮತಗಳನ್ನು ನೀಡಲು ಅವಕಾಶವಿರುವುದಿಲ್ಲ. ಪರ್ಯಾಯವಾಗಿ ನಿರಾಸಕ್ತಿ ವ್ಯಕ್ತಪಡಿಸುವ ಆಯ್ಕೆಯನ್ನು ಮತದಾರರು ಆಯ್ಕೆಮಾಡಿರುವುದರಲ್ಲಿ ತಪ್ಪು ಕಾಣುವುದಿಲ್ಲ.

ಈ ಚುನಾವಣೆಯಲ್ಲಿ ರಾಷ್ಟ್ರ ಮಟ್ಟದ ಪ್ರಮುಖ ಪಕ್ಷಗಳು ನಡೆಸಿದ ಅಬ್ಬರದ ಪ್ರಚಾರಗಳ ಕಾರಣದಿಂದ ಸ್ಥಳೀಯ ಪಕ್ಷಗಳು ಹಾಗೂ ಸ್ವತಂತ್ರ ಅಭ್ಯರ್ಥಿಗಳನ್ನು ಯಾರೂ ಗಮನಿಸಿಯೇ ಇರುವುದಿಲ್ಲ. ನಂತರದ ಬೆಳವಣಿಗೆಗಳನ್ನು ಕಂಡ ನಂತರ ಹೆಚ್ಚು ಸಂಖ್ಯೆಯಲ್ಲಿ ಸ್ವತಂತ್ರ ಅಭ್ಯರ್ಥಿಗಳು ಯಶಸ್ವಿಯಾಗದಿರುವುದು ಒಳಿತಾಗಿದ್ದರೂ ಸ್ಥಳೀಯ ಸಮಸ್ಯೆಗಳ ಬಗ್ಗೆ ಶೀಘ್ರವಾಗಿ ಸ್ಪಂದಿಸಬಲ್ಲ ಅಭ್ಯರ್ಥಿಗಳನ್ನು ತಿರಸ್ಕರಿಸಿರುವುದು ಸರಿಯೇ ಎಂಬ ಪ್ರಶ್ನೆ ಏಳುತ್ತದೆ.

**ಬಿ.ಆರ್ ರವೀಂದ್ರನಾಥ್**
ಸಂಪಾದಕರು

## ಜೂನ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಮಾಸ್ತಿ ವೆಂಕಟೇಶ ಐಯ್ಯಂಗಾರ್ | ೬-೬-೧೮೯೧ |
| ಎ.ಎನ್. ಮೂರ್ತಿರಾವ್ | ೧೬-೬-೧೯೦೦ |
| ಸೆಡಿಯಾಪು ಕೃಷ್ಣಭಟ್ಟ | ೮-೬-೧೯೦೨ |
| ತ.ಸು. ಶಾಮರಾಯರು | ೧೨-೬-೧೯೦೬ |
| ಜಯದೇವಿ ತಾಯಿ ಲಿಗಾಡೆ | ೨೩-೬-೧೯೧೨ |
| ಸಿದ್ದಯ್ಯ ಪುರಾಣಿಕ | ೧೮-೬-೧೯೧೮ |
| ನಿರಂಜನ | ೧೫-೬-೧೯೨೪ |

## ಜೂನ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಬಿ. ವೆಂಕಟಾಚಾರ್ಯ | ೨೬-೬-೧೯೧೪ |
| ಫ.ಗು. ಹಳಕಟ್ಟಿ | ೨೯-೬-೬೪ |
| ಮಾಸ್ತಿ ವೆಂಕಟೇಶ ಐಯ್ಯಂಗಾರ್ | ೬-೬-೧೯೮೬ |
| ಡಿ. ಆರ್. ನಾಗರಾಜ್ | ೧೨-೬-೧೯೯೮ |

## ಪ್ರಕಟಣೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿತವಾಗಿರುವ 'ಗೋವಿಂದ ಜಾಲಿಹಾಳ ದತ್ತಿ' ಕಾರ್ಯಕ್ರಮದ ಅಂಗವಾಗಿ ೨೦೧೮ರ ಜೂನ್ ೨೪ರಂದು ಭಾನುವಾರ ೧೩ ರಿಂದ ೧೮ ವರ್ಷಗಳ ನಡುವಣ ಯುವಜನತೆಗಾಗಿ 'ಭಕ್ತಿಗೀತೆ ಗಾಯನ' ಸ್ಪರ್ಧೆಯನ್ನು ಪ್ರತಿಷ್ಠಾನದ ಎಂ.ವಿ.ಸೀ ಸಭಾಂಗಣದಲ್ಲಿ ನಡೆಸಲಾಗುವುದು. ಸ್ಪರ್ಧೆಯಲ್ಲಿ ಗೆದ್ದವರಿಗೆ ಬಹುಮಾನಗಳನ್ನೂ ಪ್ರಶಸ್ತಿ ಪತ್ರಗಳನ್ನೂ ನೀಡಲಾಗುವುದು.ಸ್ಪರ್ಧೆಯು ಅಂದು ಬೆಳಗ್ಗೆ ೧೦-೩೦ ಗಂಟೆಗೆ ಆರಂಭವಾಗುತ್ತದೆ.ಅನಂತರ ಬಹುಮಾನ ವಿತರಣೆ ನಡೆಯುತ್ತದೆ. ಆಸಕ್ತರು ಹುಟ್ಟಿದ ತಾರೀಕಿನ ಬಗೆಗಿನ ದಾಖಲೆಯೊಡನೆ **ದಿನಾಂಕ: ೧೦ ಜೂನ್ ೨೦೧೮ರ ಒಳಗೆ ತಮ್ಮ ಹೆಸರನ್ನು ನೋಂದಾಯಿಸಿ ಕೊಳ್ಳಬಹುದು**. ಪ್ರವೇಶ ಶುಲ್ಕವಿಲ್ಲ. ಹೆಚ್ಚಿನ ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಬಹುದು.

## ಪ್ರಕಟಣೆ

ಬಿಎಂಶ್ರೀ ಪ್ರತಿಷ್ಠಾನವು ಕಳೆದ 37 ವರ್ಷಗಳಲ್ಲಿ ಬಹಳಷ್ಟನ್ನು ಸಾಧಿಸಿರುತ್ತದೆ. ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಬಹಳಷ್ಟು ಹಿರಿಯರು ಭಾಗವಹಿಸಿ ಪ್ರತಿಷ್ಠಾನದ ಏಳಿಗೆಗಾಗಿ ಶ್ರಮಿಸಿರುತ್ತಾರೆ.ಪ್ರಸ್ತುತ ಪ್ರತಿಷ್ಠಾನದ ಸಾಧನೆಗಳನ್ನು ಹಾಗೂ ಹಿರಿಯರ ಅನುಭವಗಳನ್ನು ದಾಖಲಿಸುವ ಯೋಜನೆಯನ್ನು ಪ್ರತಿಷ್ಠಾನವು ಹಮ್ಮಿಕೊಂಡಿದ್ದು ಬರಲಿರುವ ಜುಲೈ-ಆಗಸ್ಟ್ ತಿಂಗಳಿನಲ್ಲಿ ಒಂದು ಪುಸ್ತಕವನ್ನು ಪ್ರಕಟಿಸಲು ಉದ್ದೇಶಿಸಿರುತ್ತದೆ. ಬಿಎಂಶ್ರೀ ಪ್ರತಿಷ್ಠಾನದ ಬಗ್ಗೆ ಅಭಿಮಾನ ಹೊಂದಿರುವ ಎಲ್ಲಾ ಓದುಗರೂ ಹಾಗೂ ಸದಸ್ಯರೂ, ಪ್ರತಿಷ್ಠಾನದ ಜೊತೆ ತಮ್ಮ ಒಡನಾಟವನ್ನು ದಾಖಲಿಸಿರುವ ಲೇಖನವನ್ನು ದಯವಿಟ್ಟು ನೀಡಬೇಕೆಂದು ಕೋರುತ್ತೇವೆ. (ಪುಟ ಮಿತಿ ಎ4 ಗಾತ್ರದ 3 ರಿಂದ 5 ಪುಟಗಳು). ಲೇಖನವನ್ನು ಜೂನ್ 15ರ ಒಳಗೆ ತಲುಪಿಸಿದಲ್ಲಿ ಬಹಳ ಅನುಕೂಲವಾಗುತ್ತದೆ.

## ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/- (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/- ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.

## ಕೋರಿಕೆ

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. ೨೦/ - ಆಗಿದ್ದು ಐದು ವರ್ಷಗಳ ಚಂದಾಹಣ ರೂ, ೧೦೦/- ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

# ಜೂನ್ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು
## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಪ್ರತಿಷ್ಠಾನ



### ೦೭-೦೬-೨೦೧೮ ಗುರುವಾರ ಸಂಜೆ ೬-೦೦ ಗಂಟೆಗೆ

**"ಅಕ್ಕರಗೊಟ್ಟಿ"**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ಹಟ್ಟಿಕಾಳಗ

ಚಾಲನೆ ನೀಡುವವರು : ಡಾ॥ ಸಿ.ಯು. ಮಂಜುನಾಥ



### ೧೮-೬-೨೦೧೮ ಸೋಮವಾರ ಸಂಜೆ ೫-೦೦ಗಂಟೆಗೆ

**ಜಯಲಕ್ಷ್ಮಮ್ಮ ಬಾಪುರಾಮಣ್ಣ ದತ್ತಿ- ಗಮಕ**

ಪ್ರಸಂಗ : ವಿಶ್ವೇಶ್ವರ ಸಾಕ್ಷಾತ್ಕಾರ

ಗಮಕವಾಚನ : ಶ್ರೀಮತಿ ಶೋಭಾ ಶಶಿಧರ್

ವ್ಯಾಖ್ಯಾನ : ಶ್ರೀ ವಿ. ಶ್ರೀನಿವಾಸ ಫಣಿ



### ೨೪-೦೬-೨೦೧೮ ಭಾನುವಾರ ಬೆಳಿಗ್ಗೆ-೧೦-೩೦

**ಗೋವಿಂದ ಜಾಲಿಹಾಳ-ದತ್ತಿ**

**ಭಕ್ತಿಗೀತೆಗಳ ಸ್ಪರ್ಧೆ-ಸಂಗೀತ ಕಾರ್ಯಕ್ರಮ**

### ೨೫-೦೬-೨೦೧೮ ಸೋಮವಾರ ಸಂಜೆ ೬-೦೦ ಗಂಟೆಗೆ

**'ಸಾಹಿತ್ಯ ವಿಹಾರ'-೪**

ಸಾಕ್ಷ್ಯಚಿತ್ರ ಪ್ರದರ್ಶನ

## ಕಿರುಪರಿಚಯ
### ಶ್ರೀಮತಿ ಶೋಭಾ ಶಶಿಧರ್



ವಿದ್ಯಾರ್ಹತೆ ಬಿ.ಎ. ಬಾಲ್ಯದಿಂದಲೇ ಕರ್ನಾಟಕ ಶಾಸ್ತ್ರೀಯ ಸಂಗೀತದ ಅಭ್ಯಾಸ. ಸೀನಿಯರ್ ಪರೀಕ್ಷೆಯಲ್ಲಿ ಉತ್ತೀರ್ಣ. ಗಮಕ ಕ್ಷೇತ್ರದಲ್ಲಿ ತಾಯಿ ಸುಭದ್ರಾ ಸೋಮಶೇಖರ್‌ರವರೇ ಮೊದಲ ಗುರು. ಪ್ರಸ್ತುತ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಮಾಜಿ ಅಧ್ಯಕ್ಷೆ, ಗಮಕ ಕಲಾಶ್ರೀ ಶ್ರೀಮತಿ ಗಂಗಮ್ಮ ಕೇಶವಮೂರ್ತಿಯವರ ಬಳಿ ಗಮಕ ಅಭ್ಯಾಸ.

ಕನ್ನಡ ಸಾಹಿತ್ಯ ಪರಿಷತ್ ನಡೆಸುತ್ತಿದ್ದ ಗಮಕ ಪ್ರವೇಶ ಮತ್ತು ಪ್ರೌಢ ಪರೀಕ್ಷೆಗಳಲ್ಲಿ ಉತ್ತೀರ್ಣ.ಕರ್ನಾಟಕ ಗಮಕ ಕಲಾ ಪರಿಷತ್ತು ನಡೆಸುವ ಗಮಕ ಪರೀಕ್ಷೆಗಳಿಗೆ ಬೋಧಕರು ಮತ್ತು ಪರೀಕ್ಷಕರು.

'ಶ್ರೀ ವೀಣಾಪಾಣಿ ಸಂಗೀತಾಲಯ' ಎಂಬ ಸಂಗೀತ ಪಾಠಶಾಲೆಯನ್ನು ಸ್ಥಾಪಿಸಿರುತ್ತಾರೆ.ಬೆಂಗಳೂರು ಮತ್ತು ಕರ್ನಾಟಕ ರಾಜ್ಯಾದ್ಯಂತ ಹಲವು ಗಮಕ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಆಕಾಶವಾಣಿಯಲ್ಲಿ ೩೫ವರ್ಷಗಳಿಂದ ಯುವವಾಣಿ ಮತ್ತು ಗಮಕವಾಚನ ಕಾರ್ಯಕ್ರಮಗಳನ್ನು ನೀಡುತ್ತಾ ಬಂದಿದ್ದಾರೆ.ಇವರು ದೂರದರ್ಶನದ ಚಂದನವಾಹಿನಿಯಲ್ಲಿ ಗಮಕ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಜೀ ಕನ್ನಡವಾಹಿನಿಯ 'ಸರಿಗಮಪ' ಕಾರ್ಯಕ್ರಮದ ಸೀಸನ್ ೧೧ರಲ್ಲಿ ಸ್ಪರ್ಧಿಯಾಗಿ ಭಾಗವಹಿಸಿದ್ದಾರೆ.

ಪದ್ಮನಾಭನಗರ ಗಮಕ ಕಲಾಭಿಮಾನಿಗಳ ಒಕ್ಕೂಟ ಮತ್ತು ಲಕ್ಷ್ಮೀಕಾಂತ ದೇವಾಲಯ ಇವರಿಗೆ 'ಗಮಕಕೋವಿದೆ' ಬಿರುದನ್ನು ನೀಡಿದೆ.ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯು ಗಮಕ ಕ್ಷೇತ್ರದಲ್ಲಿ ಇವರ ಸಾಧನೆಯನ್ನು ಗುರುತಿಸಿ 'ನಮ್ಮ ಸಾಧಕರಿವರು' ಪ್ರಶಸ್ತಿ ನೀಡಿ ಗೌರವಿಸಿದೆ.ಶ್ರೀಮಾತಾ ಮಹಿಳಾಸಂಘ, ಬೆಂಗಳೂರು ಇವರಿಗೆ ಸಾಧಕಿ ಪ್ರಶಸ್ತಿ ನೀಡಿ ಗೌರವಿಸಿದೆ.

## ಕಿರುಪರಿಚಯ
### ಶ್ರೀ ವಿ. ಶ್ರೀನಿವಾಸ ಫಣಿ



ಸಹಾಯಕ ಕಮೀಶನರ್, ಕಸ್ಟಮ್ಸ್ (ನಿವೃತ್ತ)

ನಿವೃತ್ತರಾದ ನಂತರ ಶ್ರೀ ಶ್ರೀನಿವಾಸ ಫಣಿ ಅವರು ಗಮಕ ವ್ಯಾಖ್ಯಾನವನ್ನು ಆಳವಾಗಿ ಅಭ್ಯಾಸ ಮಾಡಿ ಗಮಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುತ್ತಾರೆ. ಮೈಸೂರಿನ ಹಲವಾರು ಪ್ರತಿಷ್ಠಿತ ಸಂಸ್ಥೆಗಳಲ್ಲಿ ವ್ಯಾಖ್ಯಾನ ನೀಡಿರುವುದಲ್ಲದೇ ಮೈಸೂರಿನ ಆಕಾಶವಾಣಿಯಲ್ಲಿ ರಾಮಾಯಣ ದರ್ಶನಂ ನ ಕೆಲವು ಭಾಗಗಳ ವ್ಯಾಖ್ಯಾನ ನೀಡಿರುತ್ತಾರೆ.

ಶ್ರೀಯುತರು ಮೈಸೂರು ಜಿಲ್ಲೆ ಗಮಕ ಕಲಾ ಪರಿಷತ್ ಹಾಗೂ ಕಾವ್ಯರಂಜನಿ ಸಭಾದ ಚಟುವಟಿಕೆಗಳಲ್ಲಿ ಸಕ್ರಿಯ ಸದಸ್ಯರಾಗಿರುತ್ತಾರೆ.

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

**'ಅಕ್ಕರಗೊಟ್ಟಿ'**

೨೫-೦೪-೨೦೧೮

ವಿಷಯ: ಕುಮಾರ ವ್ಯಾಸ ಭಾರತ-ಒಂದು ಅನಿಸಿಕೆ



ಚಾಲನೆ: ಡಾ. ಕೆ.ವಿ.ಶ್ರೀನಿವಾಸ ಮೂರ್ತಿ(ವಿಶ್ರಾಂತ ಕನ್ನಡ ಉಪನ್ಯಾಸಕರು)

ಕವಿ ಕುಮಾರವ್ಯಾಸನು ಕನ್ನಡ ಸಾಹಿತ್ಯದ ಒಂದು ಅದ್ವಿತೀಯ ಪ್ರತಿಭೆ. ಮೂಲ ಮಹಾಭಾರತವನ್ನೇ ಅವಲಂಬಿಸಿ, ದೇಸಿ ಮಾರ್ಗವನ್ನು ಅನುಸರಿಸಿ ಕನ್ನಡದಲ್ಲಿ ವ್ಯಾಸ ಭಾರತವನ್ನು ಹತ್ತು ಪರ್ವಗಳಲ್ಲಿ ನೀಡಿದ ಇವನ ಕಾವ್ಯವೂ ಸೃಜನ ಶೀಲತೆಯ ಕೊಡುಗೆಯಲ್ಲದೆ ಮತ್ತಿನ್ನೇನು?ವ್ಯಾಸ ಭಾರತದಲ್ಲಿ ತಾನು ಕಂಡದನ್ನು, ತನ್ನ ಕಾಣುವಿಕೆಗನುಗುಣವಾಗಿ ರೂಪುಗೊಂಡಿದ್ದೇ ಕುಮಾರವ್ಯಾಸ ಭಾರತ. ತನ್ನದು ಲೌಕಿಕ ಕಾವ್ಯವಲ್ಲ. ತನ್ನ ಕಾವ್ಯದ ಓದಿನಿಂದ ಜನಸಾಮಾನ್ಯರು ಪಾವನರಾಗಬೇಕೆಂಬ ಆಸೆಯನ್ನು ಕವಿ ತನ್ನ ಕಾವ್ಯದಲ್ಲಿ ವ್ಯಕ್ತಪಡಿಸಿದ್ದಾನೆ.

ಇಲ್ಲಿ ಕವಿ ಶ್ರೀ ಕೃಷ್ಣನ ಮಹಿಮೆಯನ್ನು ಹತ್ತು ಪರ್ವಗಳಲ್ಲಿ ಉದ್ಯೋಗ ಪರ್ವದಿಂದಾರಂಭಿಸಿ ಅಂತ್ಯದವರೆಗೂ ವೈಭವೀಕರಿಸಿದ್ದಾನೆ ಭಾರತ ಯುದ್ಧ ಮುಗಿದು ಧರ್ಮರಾಯನ ಪಟ್ಟಾಭಿಷೇಕವಾದ ನಂತರ 'ಕಾವ್ಯವು ಮುಕ್ತಾಯಗೊಳ್ಳುತ್ತದೆ. ಕವಿ ತನ್ನ ಕಾವ್ಯವನ್ನು ಕೃಷ್ಣಸುತ್ತಿಗೆ ಮೀಸಲಾಗಿಸಿದ್ದಾನೆ. ಕೆಲವು ಸಂದರ್ಭಗಳೊಂದಿಗೆ ವಿವರಿಸಿ, ಪದ್ಯಗಳ ವಾಚನವನ್ನೂ ಮಾಡಿದರು. ಕುಮಾರವ್ಯಾಸ ಭಾರತವು, ಕೃಷ್ಣನ ಕಥನವೇ ಎಂಬ ತಮ್ಮ ದೃಢವಾದ ಅನಿಸಿಕೆಯನ್ನು ಸಭಿಕರಲ್ಲಿ ಹಂಚಿಕೊಂಡರು.

ಸಂವಾದ ಕಾರ್ಯಕ್ರಮದಲ್ಲಿ ಸಭಿಕರ ಪ್ರತಿಕ್ರಿಯೆಗೆ ಸೂಕ್ತವಾದ ಉತ್ತರಗಳನ್ನು ನೀಡಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು.

ಚರ್ಚೆ ಪ್ರಾರಂಭದಲ್ಲಿ ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ಪಿ.ವಿ. ನಾರಾಯಣ ಅವರು ಸಭೆಗೆ ಶ್ರೀನಿವಾಸಮೂರ್ತಿಯವರನ್ನು ಪರಿಚಯಿಸಿದರು ಹಾಗೂ ಪ್ರತಿಷ್ಠಾನ ನಡೆಸುತ್ತಿರುವ ಹಳಗನ್ನಡ ಡಿಪ್ಲೊಮಾ ತರಗತಿಗೆ ಶ್ರೀಯುತರು ತರಗತಿಗಳನ್ನು ನಡೆಸಿಕೊಟ್ಟಿರುವುದಾಗಿ ತಿಳಿಸಿದರು.

ಡಾ॥ ವಿಜಯಾ ಸುಬ್ಬರಾಜ್ ವಂದನಾರ್ಪಣೆ ಮಾಡಿದರು.

---

**ಒಂದನೇ ಪುಟದಿಂದ**

ಪ್ರತಿಷ್ಠಾನದ ಹಿತೈಷಿಗಳಾದ ಮತ್ತು ಹಳಗನ್ನಡದ ಬಗ್ಗೆ ವಿಶೇಷ ಒಲವಿರುವ ಶ್ರೀ ಪಿ.ಆರ್.ಶಿವಶಂಕರ್, ಇಂಜಿನಿಯರ್, (೭೯ ವರ್ಷ) ಹತ್ತು ಮಂದಿ ಅಧ್ಯಾಪಕ ವೃಂದಕ್ಕೆ ಮತ್ತು ಅಧ್ಯಾಪಕ- ವಿದ್ಯಾರ್ಥಿ ವೃಂದದ ಸಂಯೋಜನಾಧಿಕಾರಿಯಾಗಿ ಕಾರ್ಯನಿರ್ವಹಿಸಿದ ಶ್ರೀ ಬಿ.ಎಸ್. ಸತೀಶ್ ಅವರಿಗೂ ತಲಾ ರೂ. ೨೦೦೦/-ನಂತೆ ಮೆಚ್ಚಿನ ಸಂಭಾವನೆ ನೀಡಿ ತಮ್ಮ ಉದಾರತೆಯನ್ನು ಮೆರೆದಿದ್ದಾರೆ. ಜೊತೆಗೆ ಮೊದಲ ಮೂರು ಸ್ಥಾನಗಳನ್ನು ಗಳಿಸಿದ ವಿದ್ಯಾರ್ಥಿಗಳಿಗೂ ನಗದು ಬಹುಮಾನ ಘೋಷಿಸಿದ್ದು, ಕೆಳಕಂಡ ವಿದ್ಯಾಥಿಗಳು ಆ ಬಹುಮಾನವನ್ನು ಪಡೆದಿದ್ದಾರೆ.

೧. ಶ್ರೀಮತಿ ಲಕ್ಷ್ಮೀ ಎಸ್. - ೫,೦೦೦/-

೨. ಶ್ರೀಮತಿ ಲಕ್ಷ್ಮೀಚಂದ್ರಶೇಖರ್ - ೨,೦೦೦/-

೩. ಶ್ರೀಮತಿ ಅಂಬಿಕ ಹೆಚ್.ಕೆ. - ೧,೦೦೦/-

ಗರಿಷ್ಠ ಹಾಜರಾತಿ ದಾಖಲಿಸಿದ ಇಬ್ಬರು ವಿದ್ಯಾರ್ಥಿಗಳಿಗೆ ಪ್ರೊ॥ ಜಿ. ಅಶ್ವತ್ಥನಾರಾಯಣ ಪುಸ್ತಕ ಬಹುಮಾನ ನೀಡಿದರು.





ಬಹುಮಾನ ಪಡೆದವರು ಶ್ರೀಮತಿ ಭಾರತಿ ಆರ್. ಮತ್ತು ಶ್ರೀ ಕೆ.ಎಸ್.ಹರೀಶ್. ಕಾರಣಾಂತರಗಳಿಂದ ತರಗತಿಗಳಿಗೆ ಹಾಜರಾಗದ ವಿದ್ಯಾರ್ಥಿಗಳಿಗೆ, ಧ್ವನಿ ಮುದ್ರೀಕರಿಸಿದ ಪಾಠಗಳನ್ನು ಆಯಾದಿನವೇ ವ್ಯಾಟ್ಸ್‌ಆ್ಯಪ್ ಮೂಲಕ ರವಾನಿಸಲಾಗುತ್ತಿತ್ತು.

ಡಾ॥ ಪಿ.ವಿ. ನಾರಾಯಣ ಅವರು ಪ್ರಾಸ್ತಾವಿಕ ನುಡಿಗಳನ್ನಾಡಿ ಎಲ್ಲರಿಗೂ ಸ್ವಾಗತ ಕೋರಿದರು. ವಿದ್ಯಾರ್ಥಿಗಳು ಹಾಗೂ ಉಪನ್ಯಾಸಕರು ತಮ್ಮ ಅನಿಸಿಕೆಗಳನ್ನು ಹಂಚಿಕೊಂಡರು.

ಡಾ. ವಿಜಯಾ ಸುಬ್ಬರಾಜ್ ಅವರು ಪ್ರಮಾಣಪತ್ರ ವಿತರಣೆ ಕಾರ್ಯಕ್ರಮದ ಯಶಸ್ಸಿಗೆ ಕಾರಣಕರ್ತರಾದ ವಿದ್ಯಾರ್ಥಿಗಳಿಗೂ ಅಧ್ಯಾಪಕವೃಂದಕ್ಕೂ, ಅತಿಥಿಗಳಿಗೂ ವಂದನೆ ಸಲ್ಲಿಸಿದರು.

ಇದೇ ದಿನ ಮೇಲ್ಕಂಡ ಡಿಪ್ಲೊಮ ತರಗತಿಯ ವಿದ್ಯಾರ್ಥಿನಿಯಾದ ಪ್ರಖ್ಯಾತ ಕಲಾವಿದೆ ಪ್ರೊ॥ ಲಕ್ಷ್ಮೀಚಂದ್ರಶೇಖರ್ ಅವರು ವೈಯಾಕರಣಿ ಗರಣಿ ಕೃಷ್ಣಾಚಾರ್ಯ ದತ್ತಿ ಆಶ್ರಯದಲ್ಲಿ ಡಾ॥ ಚಂದ್ರಶೇಖರ ಕಂಬಾರ ವಿರಚಿತ "ಸಿಂಗಾರವ್ವ ಮತ್ತು ಅರಮನೆ"ಯ ಏಕವ್ಯಕ್ತಿ ಅಭಿನಯ ಮಾಡಿದರು. ಎಪ್ಪತ್ತು ನಿಮಿಷಗಳ ಕಾಲ ಅಡೆತಡೆಯಿಲ್ಲದೇ ನಡೆಸಿದ ಅವರ ಅಭಿನಯ ಅದ್ಭುತವಾಗಿತ್ತು ಹಾಗೂ ಎಲ್ಲಾ ಪ್ರೇಕ್ಷಕರನ್ನು ಸೂರೆಗೊಂಡಿತು. ಕೊನೆಯಲ್ಲಿ ಡಾ॥ ಪಿ.ವಿ. ನಾರಾಯಣ ಅವರುಪ್ರೊ॥ ಲಕ್ಷ್ಮೀಚಂದ್ರಶೇಖರ್ ಅವರನ್ನು "ಸಾವಿರ ಭಾವನೆಗಳ ಸರದಾರಣಿ" ಎಂದು ಬಣ್ಣಿಸಿ ಎಲ್ಲರಿಗೂ ವಂದಿಸಿದರು.

## ೧೮-೫-೨೦೧೮

## ಡಿವಿಜಿ, ಕ.ವೆಂ.ರಾಘವಾಚಾರ್, ಬಿ.ಎಸ್.ಸಣ್ಣಯ್ಯ, ಎಂ.ಎಲ್. ಲಲಿತಮ್ಮ ದತ್ತಿ

ವಿಷಯ :'ಪತ್ರಕರ್ತ ಡಿವಿಜಿ'

ಉಪನ್ಯಾಸ : ಶ್ರೀ ಎಸ್. ದಿವಾಕರ್(ಪ್ರಖ್ಯಾತ ಲೇಖಕರು, ಪತ್ರಕರ್ತರು)

ಶ್ರೀ ಎಸ್. ದಿವಾಕರ್ ಅವರು ಪತ್ರಕರ್ತರು ಮತ್ತು ಕರ್ನಾಟಕದ ಖ್ಯಾತ ಲೇಖಕರಾಗಿ ಗುರುತಿಸಿ ಕೊಳ್ಳುತ್ತಾರೆ.ಗಂಭೀರವಾದ ವಿಷಯವನ್ನು, ಲೇಖನಗಳನ್ನು ಪ್ರಕಟಿಸುವುದರಲ್ಲಿ ಪರಿಣಿತರು.ಕಥೆಗಾರರಾಗಿಯೂ ಓದುಗರು ಅವರನ್ನು ಗುರುತಿಸುತ್ತಾರೆ.ಅವರ ಕ್ರೌರ್ಯ ಕಥೆಗಳ ಚಿತ್ರಣಶೈಲಿ ವಿಶಿಷ್ಟವಾದದ್ದು. ವಿಪರೀತ ಓದುವಿಕೆಯಿಂದಾಗಿ ವಿಮರ್ಶಕರಾಗಿಯೂ ಅಪಾರ ಅನುಭವವನ್ನು ಹೊಂದಿದ್ದಾರೆ. ಅವರು ಅನುವಾದಕರೂ ಸಹ-ಹೀಗೆಂದು ಡಾ॥ ಪಿ.ವಿ.ನಾರಾಯಣ ಅವರು ಉಪನ್ಯಾಸಕರ ಪರಿಚಯವನ್ನು ಸಭೆಗೆ ಮಾಡಿಕೊಟ್ಟು, ಅಪಾರ ಸಂಖ್ಯೆಯಲ್ಲಿ ಆಗಮಿಸಿದ್ದ ಡಿವಿಜಿ ಅಭಿಮಾನಿಗಳನ್ನೂ ಮತ್ತು ಶ್ರೀ ದಿವಾಕರ್ ಅವರ ಅಭಿಮಾನಿಗಳನ್ನು ಸಭೆಗೆ ಸ್ವಾಗತಿಸಿದರು.

ಡಿವಿಜಿಯವರು ಪತ್ರಿಕೋದ್ಯಮದಲ್ಲಿ ತಮ್ಮನ್ನು ತೊಡಗಿಸಿಕೊಂಡಷ್ಟು ಸಾಹಿತ್ಯಕ್ಷೇತ್ರದಲ್ಲಿ ತೊಡಗಿಸಿಕೊಂಡಿಲ್ಲ. ೧೯೦೬ರಲ್ಲಿ ಬೆಂಗಳೂರಿಗೆ ಆಗಮಿಸಿ ಪತ್ರಿಕೆಗಳಲ್ಲಿ ಅವರು ಲೇಖನ ವ್ಯವಸಾಯ ಆರಂಭಮಾಡಿ ೧೯೪೯ರಲ್ಲಿ ಪಬ್ಲಿಕ್ ಅಫೇರ್ಸ್ ಎಂಬ ಪತ್ರಿಕೆಯನ್ನು ತಾವೇ ಆರಂಭಮಾಡುವವರೆಗೆ, ದೀರ್ಘಕಾಲಾವಧಿ ಪತ್ರಿಕೋದ್ಯಮ ರಂಗದಲ್ಲಿ ದುಡಿದರು. ಅವರ ಕಾರ್ಯ-ಕ್ಷೇತ್ರ ಬಹಳ ವಿಶಾಲವಾದುದು.ಪತ್ರಿಕೋದ್ಯಮದ ಜೊತೆಜೊತೆ ಪತ್ರಿಕಾಸೇವೆ, ಸಾರ್ವಜನಿಕ ಮತ್ತು ಸಮಾಜ ಸೇವೆ, ಭಾರತದ ಸ್ವಾತಂತ್ರ್ಯದ ಬಗ್ಗೆ ಚಿಂತನೆ, ರಾಜಕೀಯ-ಹೀಗೆ ಎಲ್ಲಾಕ್ಷೇತ್ರಗಳಲ್ಲೂ ಸಮರ್ಪಕವಾಗಿ ದುಡಿದ ವ್ಯಕ್ತಿ.

ಶ್ರೀ ಎಸ್. ದಿವಾಕರ್ ಅವರು ಡಿವಿಜಿಯವರ ಬದುಕಿನ ಮೆಟ್ಟಿಲುಗಳನ್ನು ಚಿತ್ರಿಸಿ, ತಮ್ಮದೇ ಆದ ಶೈಲಿಯಲ್ಲಿ ಜ್ಞಾಪಕ ಚಿತ್ರಗಳ ಮೂಲಕ ಉಪನ್ಯಾಸಕ್ಕೆ ಕಳೆತಂದು ಕೊಟ್ಟರು. ಅವರ ಜೀವನ ಸರಳವಾಗಿದ್ದರೂ, ಚಿಂತನೆ ಬಹಳ ಉನ್ನತ ಮಟ್ಟದಾಗಿತ್ತೆಂದು ಅಭಿಪ್ರಾಯ ಪಟ್ಟರು.




ಡಾ॥ ವಿಜಯಾಸುಬ್ಬರಾಜ್ ವಂದನೆ ಸಲ್ಲಿಸಿದರು.

**ಶ್ರದ್ಧಾಂಜಲಿ.**

**ಹಿರಿಯ ವಿಮರ್ಶಕ ಡಾ. ಗಿರಡ್ಡಿ ಗೋವಿಂದರಾಜ ನಿಧನ.**

ಧಾರವಾಡ ಸಾಹಿತ್ಯ ಸಂಭ್ರಮ ಟ್ರಸ್ಟ್ ಅಧ್ಯಕ್ಷರಾಗಿದ್ದ ಅವರು ಇಂಗ್ಲಿಷ್ ಹಾಗೂ ಕನ್ನಡದಲ್ಲಿ ಹಲವಾರು ಕತೆ, ಕವಿತೆ ಹಾಗೂ ವಿಮರ್ಶಾ ಕೃತಿಗಳನ್ನು ರಚಿಸಿದ್ದಾರೆ. ಇವರು ಧಾರವಾಡದ ಕರ್ನಾಟಕ ಕಾಲೇಜಿನಿಂದ ಬಿ.ಎ., ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. (ಇಂಗ್ಲಿಷ್) ಮತ್ತು ಎಂ.ಎ. (ಕನ್ನಡ) ಪದವಿ ಪಡೆದು ನಂತರ ಇಂಗ್ಲೆಂಡ್ನಲ್ಲಿ ಭಾಷಾಶಾಸ್ತ್ರದಲ್ಲಿ ಎಂ.ಎ.ಪದವಿ, ಗುಲ್ಬರ್ಗ ವಿಶ್ವವಿದ್ಯಾಲಯದಿಂದ ಪಿ.ಎಚ್.ಡಿ. ಪದವಿ ಪಡೆದಿದ್ದರು. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಅಧ್ಯಾಪಕರಾಗಿ, ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ೧೯೯೬ರಲ್ಲಿ ನಿವೃತ್ತಿ ಹೊಂದಿದ್ದರು. ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ, ಅಂಬಿಕಾತನಯದತ್ತ ಪ್ರಶಸ್ತಿ, ಡಾ. ಜಿಎಸ್ಸೆಸ್ ಪ್ರಶಸ್ತಿ ಸೇರಿದಂತೆ ಹತ್ತಾರು ಪ್ರಶಸ್ತಿಗಳಿಗೆ ಗಿರಡ್ಡಿ ಅವರು ಭಾಜನರಾಗಿದ್ದಾರೆ. ಪ್ರತಿಷ್ಠಾನವು ಅವರ ಆತ್ಮಕ್ಕೆ ಸದ್ಗತಿ ದೊರಕಲೆಂದು ಪ್ರಾರ್ಥಿಸುತ್ತದೆ.

**ಪುಸ್ತಕ ಕಿರುವಿಮರ್ಶೆ**

**ಕೈಗಾರಿಕಾ ಅರ್ಥಶಾಸ್ತ್ರ:** ಲೇ: ಡಾ. ಎಚ್.ಆರ್. ಕೃಷ್ಣಯ್ಯಗೌಡ,

ಪ್ರ: ಸ್ಪಂದನ ಪ್ರಕಾಶನ, ೧೫೬, ೧೨ನೇ ಕ್ರಾಸ್, ಲಲಿತಮಹಲ್ ನಗರ, ಆವಲಹಳ್ಳಿ ಬಡಾವಣೆ, ಮೈಸೂರು-೫೭೦೦೧೧, ಪುಟಗಳು: ೩೯೨, ಬೆಲೆ: ರೂ. ೨೪೦, ೨೦೧೭.

ಪ್ರಸ್ತುತ ಪುಸ್ತಕವು ಕರ್ನಾಟಕ ರಾಜ್ಯದ ಎಲ್ಲಾ ವಿಶ್ವವಿದ್ಯಾನಿಲಯಗಳ ಎಂ.ಎ.ಮತ್ತು ಬಿ.ಎ. ತರಗತಿಗಳಿಗಾಗಿ ಹಾಗೂ ಸಂಶೋಧಕರಿಗಾಗಿ, ಉನ್ನತ ವ್ಯಾಸಂಗದವರಿಗಾಗಿ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತಯಾರಾಗುವವರಿಗಾಗಿ ರಚಿಸಲಾಗಿದೆ. ನುರಿತ ಲೇಖಕರಾದ ಡಾ.ಎಚ್.ಆರ್.ಕೃಷ್ಣಯ್ಯಗೌಡರು ಅರ್ಥಶಾಸ್ತ್ರ ಲೇಖಕರಾಗಿ ಅಭಿವೃದ್ಧಿ ಅರ್ಥಶಾಸ್ತ್ರ, ಪರಿಸರ ಅರ್ಥಶಾಸ್ತ್ರ, ಗ್ರಾಮೀಣ ಅರ್ಥಶಾಸ್ತ್ರ ಮತ್ತು ಸಹಕಾರ ವಿಷಯಗಳಲ್ಲಿ ವಿಶೇಷ ಅಧ್ಯಯನ ಮಾಡಿದ್ದಾರೆ.

ಕೈಗಾರಿಕಾ ಅರ್ಥಶಾಸ್ತ್ರದ ಪರಿಚಯ, ಉದ್ಯಮ ಸಂಸ್ಥೆಯ ಸಿದ್ಧಾಂತ, ಕೈಗಾರಿಕಾ ಸಂರಚನೆ, ಕೈಗಾರಿಕಾ ಉತ್ಪಾದಕತೆ ಮತ್ತು ದಕ್ಷತೆ, ಕೈಗಾರಿಕಾ ಕಾರ್ಮಿಕರು, ಕೈಗಾರಿಕಾ ಹಣಕಾಸು, ಮಾರುಕಟ್ಟೆ ವರ್ತನೆ ಮತ್ತು ಭಾರತದ ಕೈಗಾರಿಕಾ ಆರ್ಥಿಕತೆ, ಕೈಗಾರಿಕೀಕರಣ ಮತ್ತು ಪರಿಸರ ಕುಸಿತ - ಇಷ್ಟು ವಿಷಯಗಳ ಚರ್ಚೆ ಈ ಪುಸ್ತಕದಲ್ಲಿದೆ.೩೯೨ ಪುಟಗಳ ಈ ಪುಸ್ತಕ ೧೧ ಅಧ್ಯಾಯಗಳಲ್ಲಿದೆ.ಪ್ರತಿ ಅಧ್ಯಾಯದಲ್ಲಿ ೧೦, ೧೫, ೨೦ ವಿಷಯಗಳ ಬಗ್ಗೆ ವಿವರಣೆ ಇದೆ.ಕೈಗಾರಿಕೆಗೆ ಮುಖ್ಯವಾಗಿ ಅಗತ್ಯವಾದ ಕೈಗಾರಿಕಾ ಹಣಕಾಸಿನ ಬಗ್ಗೆ ಸಮಗ್ರ ಚಿತ್ರಣವನ್ನು ಕೊಟ್ಟಿದ್ದಾರೆ. ಇಲ್ಲಿ ಚರ್ಚಿಸಲಾಗಿರುವ ವಿಷಯಗಳೆಂದರೆ - ಉದಾ: ಕೈಗಾರಿಕಾ ಹಣಕಾಸಿನ ಮೂಲಗಳಾದ (೧) ವಾಣಿಜ್ಯ ಬ್ಯಾಂಕುಗಳು (೨) ಭಾರತದ ಸ್ಟೇಟ್ ಬ್ಯಾಂಕು (೩) ಬ್ಯಾಂಕೇತರ ಹಣಕಾಸು ಸಂಸ್ಥೆಗಳು (೪) ಕೈಗಾರಿಕಾ ಸಹಕಾರ ಸಂಘಗಳು (೫) ಸಾಲಖಾತ್ರಿ ಯೋಜನೆ (೬) ರಾಷ್ಟ್ರೀಯ ಸಣ್ಣ ಕೈಗಾರಿಕೆಗಳ ನಿಗಮ (೭) ದೇಶೀಯ ಬ್ಯಾಂಕರ್‌ಗಳು ಮತ್ತು ಹಣದ ಲೇವಾದೇವಿದಾರರು (೮) ವಿಶೇಷ ಹಣಕಾಸಿನ ಸಂಸ್ಥೆಗಳು (೯) ಭಾರತದ ರಫ್ತು-ಆಮದು ಬ್ಯಾಂಕು (೧೦) ಅಂತರರಾಷ್ಟ್ರೀಯ ಹಣಕಾಸು ನಿಗಮ (೧೧) ಲಾಭದ ಮರುಹೂಡಿಕೆ (೧೨) ಷೇರು ಪತ್ರಗಳು (೧೩) ಸಾಲಪತ್ರಗಳು (೧೪) ಋಣ ಪತ್ರಗಳು ಅಲ್ಲದೆ ವಿದೇಶೀ ಬಂಡವಾಳ, ಅದರ ಮಹತ್ವ, ಈ ಬಗ್ಗೆ ಸರ್ಕಾರದ ನೀತಿಧೋರಣೆ, ವಿದೇಶೀ ನೇರ ಹೂಡಿಕೆ, ವಿದೇಶೀ ನೇರ ಹೂಡಿಕೆಯಲ್ಲಿ ಇತ್ತೀಚಿನ ವಿದ್ಯಮಾನಗಳು, ಅಭಿವೃದ್ಧಿಶೀಲ ದೇಶಗಳಲ್ಲಿ ವಿದೇಶೀ ನೇರ ಹೂಡಿಕೆಯ ಹೆಚ್ಚಳ, ವಿದೇಶೀ ಸಾಂಸ್ಥಿಕ ಹೂಡಿಕೆ - ಹೀಗೆ ಕೃತಿಯು ಕೈಗಾರಿಕಾ ಅರ್ಥಶಾಸ್ತ್ರದ ಸಂಪೂರ್ಣ ಆಯಾಮವನ್ನು ಪರಿಚಯಿಸುತ್ತದೆ.

ಅನುಭವೀ ಲೇಖಕರಾದ ಡಾ.ಕೃಷ್ಣಯ್ಯ ಗೌಡರು ವಿಷಯದ ಜೊತೆಗೇ ಅರ್ಥಶಾಸ್ತ್ರ, ಕೈಗಾರಿಕೆಗಳಲ್ಲಿ ಬರುವ ತಾಂತ್ರಿಕ ಶಬ್ದಗಳನ್ನು ಸಮರ್ಥವಾಗಿ ಕನ್ನಡದಲ್ಲಿ ಕೊಟ್ಟಿದ್ದಾರೆ.ಸುಲಲಿತವಾದ ಭಾಷೆಯಿಂದಾಗಿ ಪುಸ್ತಕ ಸರಾಗವಾಗಿ ಓದಿಸಿಕೊಂಡುಹೋಗುತ್ತದೆ.ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ರಚಿಸಲಾಗಿರುವ ಈ ಪುಸ್ತಕದಲ್ಲಿ ಕೈಗಾರಿಕೆ, ಅರ್ಥಶಾಸ್ತ್ರಗಳ ಬಗ್ಗೆ ದೊರೆಯುವ ಪದಸಂಪತ್ತು ಅಪರಿಮಿತ.ಇಂಥಾ ಪದಗಳನ್ನು ಹುಡುಕುವುದು ಕಷ್ಟ. ಆದ್ದರಿಂದ ಲೇಖಕರು ಪುಸ್ತಕದ ಕೊನೆಯಲ್ಲಿ ಒಂದೆರಡು ಪುಟಗಳ ಅಕಾರಾದಿ - Index ಅನ್ನು ಒದಗಿಸಿದರೆ ಪುಸ್ತಕದ ಮೌಲ್ಯ ಹೆಚ್ಚುವುದಲ್ಲದೆ, ಅಧ್ಯಯನಾಸಕ್ತರಿಗೆ ತುಂಬ ಉಪಯುಕ್ತವಾಗುತ್ತದೆ.

**- ಡಾ. ಎನ್. ಗೋಪಾಲಕೃಷ್ಣ**




**ನಿವೃತ್ತಿ:** ಈಗ ಸಾಮಾನ್ಯವಾಗಿ ನಿವೃತ್ತಿ ಎಂಬ ಶಬ್ದವು ನೌಕರಿಯಲ್ಲಿದ್ದು ನಿಯಮಾನುಸಾರ ಅವಧಿ ಮುಗಿದ ಬಳಿಕ ನೌಕರನೊಬ್ಬ ಅದರಿಂದ ಬಿಡುಗಡೆಗೊಳ್ಳುವುದನ್ನು ಸೂಚಿಸುತ್ತದೆ. ಸಹಜವಾಗಿಯೇ ಈ ಪರಿಕಲ್ಪನೆ ಹಿಂದೆ ಇರಲಿಲ್ಲ: ಏಕೆಂದರೆ ಆಗ ನೌಕರಿಯಾಗಲೀ, ನಿವೃತ್ತಿಯಾಗಲೀ ರೂಢಿಯಲ್ಲಿರಲಿಲ್ಲ. ಇದೆಲ್ಲ ಕಚೇರಿ, ನೌಕರಿ, ಸಂಬಳ ಮುಂತಾದ ಪದ್ಧತಿಗಳು ಬಂದ ಆಧುನಿಕ ಕಾಲದವು. ಹೊಸ ಪದ್ಧತಿಗಳನ್ನು ಸೂಚಿಸಲು ಹೊಸ ಶಬ್ದಗಳು ಸೃಷ್ಟಿಗೊಳ್ಳಬೇಕು.

ಮೂಲತಃ ನಿವೃತ್ತಿ ಎಂಬುದು ಸಂಸ್ಕೃತ ಪದ.ಹಿಂದಿರುಗುವುದು, ಹಿಂದಕ್ಕೆ ನಡೆಯುವುದು ಎಂಬುದು ಇದಕ್ಕಿದ್ದ ಅರ್ಥ.ಕೊನೆಯಾಗುವುದೂ ಎಂಬ ಅರ್ಥವೂ ಇದಕ್ಕಿದೆ.ಪ್ರಾಪಂಚಿಕ ವ್ಯವಹಾರದಿಂದ ದೂರ ಸರಿಯುವುದೂ ಎಂಬ ಅರ್ಥವೂ ಬಳಕೆಯಲ್ಲಿತ್ತು.ಇದಕ್ಕೆ ಹತ್ತಿರವಾದ ಮತ್ತೊಂದು ಶಬ್ದವೂ ಸಂಸ್ಕೃತದಲ್ಲಿದೆ, ಅದೇ ನಿರ್ವೃತಿ. ಇದಕ್ಕೂ ಬಿಡುಗಡೆ ಎಂಬ ಅರ್ಥವಿದೆ, ಜೊತೆಗೆ ಸಂತೋಷ ಎಂಬ ಅರ್ಥವೂ ಇದೆ. ಕಾವ್ಯದ ಪ್ರಯೋಜನಗಳನ್ನು ಹೇಳುವಾಗ ಕೆಲವರು 'ಸದ್ಯಃಪರನಿರ್ವೃತಯೇ' ಎಂದೂ ಹೇಳುತ್ತಾರೆ ಅಂದರೆ ತನ್ಮಯವಾಗಿ ಓದುತ್ತಿರುವಷ್ಟು ಕಾಲ ಕಾವ್ಯವು ನಮ್ಮ ಮನಸ್ಸನ್ನು ಇಲ್ಲಿಂದ ಬಿಡುಗಡೆಗೊಳಿಸಿ ಸಂತೋಷ ನೀಡುವಂಥದು ಎಂಬುದು ಅಭಿಪ್ರಾಯ.

ಈಗ ನಿವೃತ್ತಿವೇತನ ಎಂಬ ಶಬ್ದವೂ ಬಳಕೆಯಲ್ಲಿದೆ.ನೌಕರಿಯಲ್ಲಿ ದೀರ್ಘ ಕಾಲ ದುಡಿದ ವ್ಯಕ್ತಿಯು ಅದರಿಂದ ಬಿಡುಗಡೆಗೊಂಡ ಮೇಲೆ ಪಡೆಯುವ ಸಂಭಾವನೆ ಎಂಬರ್ಥ ಅದಕ್ಕಿದೆ.ಹಿಂದೆಯೇ ಬಳಕೆಯಲ್ಲಿದ್ದ ಎರಡು ಶಬ್ದಗಳನ್ನು ಸೇರಿಸಿ ಹೊಸ ಪರಿಕಲ್ಪನೆಯೊಂದನ್ನು ಸೂಚಿಸಲು ಸಿದ್ಧಗೊಂಡ ಶಬ್ದ ಇದು.ಭಾಷೆಯು ಹೊಸ ಪರಿಕಲ್ಪನೆಗಳನ್ನು ಹಳೆಯ ಶಬ್ದಗಳ ಸಂಯೋಜನೆಗೊಳಿಸುವ ಮೂಲಕವೂ ಹೇಳುವ ಪರಿ ಇದು.ನಿವೃತ್ತಿವೇತನ ಎಂಬ ಶಬ್ದಕ್ಕೆ ಈಗ 'ಪಿಂಚಣಿ' ಎಂಬ ಇನ್ನೊಂದು ಶಬ್ದವೂ ರೂಢಿಯಲ್ಲಿದೆ; ಅದು ಇಂಗ್ಲಿಷ್‌ನ 'ಪೆನ್‌ಶನ್' ಎಂಬುದರ ಕನ್ನಡೀಕರಣಗೊಂಡ ರೂಪ. ಒಂದು ಶಬ್ದ ಸಂಸ್ಕೃತದ ಈ ಕಡೆಯಿಂದ ಬಂದುದಾದರೆ, ಮತ್ತೊಂದು ಇಂಗ್ಲಿಷ್‌ನ ಆ ಕಡೆಯಿಂದ ಬಂದುದು.ಈ ಎರಡೂ ಭಾಷೆಗಳು ಕನ್ನಡ ಶಬ್ದಭಂಡಾರದ ಹೊಲಕ್ಕೆ ಹೊಸ ಮೆಕ್ಕಲನ್ನು ತಂದು ಫಲವತ್ತಾಗಿಸುವ ಎರಡು ದೊಡ್ಡ ನದಿಗಳು.ನದಿಗಳಿರುವುದೇ ಸಮೃದ್ಧವಾಗಿ ನೀರು ಮೆಕ್ಕಲುಗಳನ್ನು ಒದಗಿಸುವುದಕ್ಕಲ್ಲವೇ?

******

**ನೆರಳು:** ಈ ದ್ರಾವಿಡ ಪದವು ಹಳಗನ್ನಡದಲ್ಲಿ 'ನೆೞಲ್' ಎಂಬ ರೂಪದಲ್ಲಿ ದೊರೆತರೆ ತಮಿಳಿನಲ್ಲಿ ನಿೞಲ್, ನೀೞಲ್ ಎಂದೂ, ಮಲಯಾಳಂನಲ್ಲಿ ನಿೞಲ್ ಎಂದೂ, ತೆಲುಗಿನಲ್ಲಿ ನೀಡ ಎಂದೂ, ತುಳುವಿನಲ್ಲಿ ನೆರಳ್, ನಿರಲ್ ಎಂದೂ ದೊರೆಯುತ್ತದೆ. ಛಾಯೆ ಎಂಬುದು ಇದರ ಮೂಲಾರ್ಥ. "ನೆೞಲ್=ಆತಪತ್ರಾದಿ ಛಾಯೆ" ಎಂದು 'ಶಬ್ದಮಣಿದರ್ಪಣ' ಅರ್ಥ ಕೊಡುತ್ತದೆ. "ಜಲದದ ನೆೞಲುಂ .. .. ನೆಲಸವು" ಎಂಬುದು 'ಕವಿರಾಜಮಾರ್ಗ'ದ ಮಾತು.ಪಂಪನ 'ಆದಿಪುರಾಣದ ಒಂದು ಸುಂದರ ಪದ್ಯದಲ್ಲಿ "ತನು ರೂಪ ವಿಭವ ಯೌವನಧನ ಸೌಭಾಗ್ಯಾಯುರಾದಿಗಳ"ನ್ನು "ಕುಡುಮಿಂಚಿನ ಪೊಳಪು ಮುಗಿಲ ನೆೞಲ್" ಮುಂತಾದುವಕ್ಕೆ ಹೋಲಿಸಲಾಗಿದೆ. "ನೆೞಲಂಚೆಯಂತೆ ನೆೞಲನೆ ತೋರ್ಪ ನೆೞಲ ಮರಂಗಳುಂಮಂ" ಎಂಬುದು ಬಂಧುವರ್ಮನ 'ಹರಿವಂಶಾಭ್ಯುದಯ' ಕಾವ್ಯದ ಸಾಲು [ನೆೞಲ್ ಎಂಬುದು ಒಂದು ಮರದ ಹೆಸರೂ ಹೌದು]."ನೀರೊಳಗಿರ್ದ ತನ್ನ ನಲ್ಲಳ ನೆೞಲಂ ಕಂಡು ನಲ್ಲಳೆಂದು ಮತಿಗೆಟ್ಟು" ಎಂಬ 'ಧರ್ಮಾಮೃತ'ದ ಮಾತಿನಲ್ಲಿ ಈ ಶಬ್ದಕ್ಕೆ ಪ್ರತಿಬಿಂಬ ಎಂಬರ್ಥ ಹೊರಡುತ್ತದೆ.ಆಧುನಿಕ ಬರಹಗಾರರಾದರೂ ತಮ್ಮ ನಾಟಕಗಳಲ್ಲಿ ಹಳಗನ್ನಡ ಬಳಸಿದ ಬಿಎಂಶ್ರೀ ಅವರು 'ಅಶ್ವತ್ಥಾಮನ್' ನಾಟಕದಲ್ಲಿ "ಇಂದವನ್, ನಾಳೆ ನಾನ್, ಏನ್ ಪಾಡೊ ಆಳ ಬಾೞ್!ಬೀಸುವ ಬಯಲ್‌ಗಾಳಿ, ಪರಿದಡಂಗುವ ನೆೞಲ್" ಎಂದು ಬರೆಯುತ್ತಾರೆ. ನಡುಗನ್ನಡದಲ್ಲಿ ಈ ಶಬ್ದದಲ್ಲಿನ ೞಕಾರ[ಅಂದರೆ ಱೞ]ದ ಸ್ಥಳದಲ್ಲಿ ಳಕಾರ[ಅಂದರೆ ಕುಳ] ಬಳಕೆಗೆ ಬಂತು. "ನೆಳಲ ಹೂಳಿಹೆನೆಂದು ಬಳಲುತ್ತಿದೆ ಜಗವೆಲ್ಲ" ಎಂಬ ಅದ್ಭುತ ರೂಪಕ ಅಲ್ಲಮನದು.ಪ್ರತಿಬಿಂಬ ಎಂಬರ್ಥದಲ್ಲಿ ಕುಮಾರವ್ಯಾಸನು "ನೆಳಲು ಜಲದಲಿ ನಡುಗಲಿನ ಮಂಡಲಕೆ ಕಂಪವೆ" ಎಂಬ ಸಾಲನ್ನು ಬರೆಯುತ್ತಾನೆ. ನೆಳಲು ಎಂಬುದಕ್ಕೆ ಕೃಪೆ ಎಂಬರ್ಥದಲ್ಲಿ ಕುಮಾರವ್ಯಾಸನು "ಕೃಷ್ಣನ ನೆಳಲು ದಿಟವುಂಟಾದೊಡೊಳಗಾಗರು ವಿರೋಧಿಗಳು" ಎಂಬಲ್ಲಿ ಬಳಸುತ್ತಾನೆ. ಪುರಂದರದಾಸರ ಕೀರ್ತನೆಯೊಂದರಲ್ಲಿಯೇ ನೆರಳು ಎಂಬ ರೂಪ ಬಳಕೆಯಾಗಿದೆ: "ನೆರಳಿಲ್ಲದೆ ನೀರಿಲ್ಲದೆ ಬೇರಿಲ್ಲದೆ ಸಸಿ ಹುಟ್ಟಿ" ಇತ್ಯಾದಿ. ಹೊಸಗನ್ನಡದಲ್ಲಿ ಈ ರೂಪವೇ ಹೆಚ್ಚು ಬಳಕೆಯಲ್ಲಿರುವುದು. ಪುತಿನ ಗಾಂಧಿಜಿಯನ್ನು ಗರುಡನ ನೆರಳಿಗೆ ಹೋಲಿಸುತ್ತಾರೆ: "ಮೇಲೊಂದು ಗರುಡ ಹಾರುತಿಹುದು, ಕೆಳಗದರ ನೆರಳು ಓಡುತಿಹುದು" ಎಂಬುದು 'ಗಾಂಧಿ' ಎಂಬ ಕವನದ ಸಾಲು. 'ನನ್ನ ನೆರಳು' ಎಂಬ ತಮ್ಮೊಂದು ಕವನದಲ್ಲಿ ಚಂದ್ರಶೇಖರ ಪಾಟೀಲರು "ಸುಳಿದು ಸುಳಿಹಿಡಿವ ಆ ತುಂಟ ನೆರಳನು ಕಂಡು ಒದೆಯಬೇಕೆನಿಸಿತ್ತು" ಎನ್ನುತ್ತಾರೆ. ಹಿಂಬಾಲಕ, ಆಶ್ರಯ, ಕೃಪೆ ಎಂಬ ಅರ್ಥಗಳಲ್ಲಿಯೂ ಈ ಪದದ ಬಳಕೆಯಿದೆ.



## ಎಂವಿಸೀ – ಬದುಕು – ಒಂದು ನೋಟ–೨

**––ಡಾ. ಪಿ.ವಿ. ನಾರಾಯಣ**

ಮೈಸೂರು ವೆಂಕಟದಾಸಪ್ಪನವರ ಸೀತಾರಾಮಯ್ಯ – ಇದು ಎಂ.ವೀ.ಸೀ ಅವರ ಪೂರ್ಣ ಹೆಸರು. ಅವರ ಪೂರ್ವಿಕರು ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಯವರು. ಯಾವುದೋ ಸಂದರ್ಭದಲ್ಲಿ ಅವರ ಹಿರಿಯರು ಮೈಸೂರಿಗೆ ಬಂದರು. ಹಾಗಾಗಿ ಎಂ.ವಿ.ಸೀ ಹುಟ್ಟಿದ್ದು ಮೈಸೂರಿನಲ್ಲಿಯೇ, ೯–೯–೧೯೧೦ ರಂದು (ಸಾಧಾರಣ ಸಂವತ್ಸರದ ಭಾದ್ರಪದ ಶುದ್ಧ ಷಷ್ಠಿ) ವೆಂಕಟದಾಸಪ್ಪ–ಸಾವಿತ್ರಮ್ಮ ದಂಪತಿಗಳ ಮೂರನೆಯ ಮಗನಾಗಿ.ಅವರ ವಂಶದ ಹಿರಿಯರು ವಿದ್ವಾಂಸರು, ಲೇಖಕರು.ಎಂವಿಸೀ ವಂಶದ ಹಿಂದಿನ ಏಳನೆಯ ತಲೆಯವರಾದ ವಾಸುದೇವಾರ್ಯರು ಸುಮಾರು ೧೭೫೦ ರಲ್ಲಿದ್ದ ವಿದ್ವಾಂಸರು, 'ವಾಸುದೇವ ಮನನ' ಮತ್ತು 'ವಿವೇಕಸಾರ' ಎಂಬೆರಡು ಕೃತಿಗಳನ್ನು ಸಂಸ್ಕೃತದಲ್ಲಿ ಬರೆದವರು.ಅವರ ಮೊಮ್ಮಗ ತಿಮ್ಮಪ್ಪದಾಸರು ಕೀರ್ತನಕಾರರು, ಕನ್ನಡ, ಸಂಸ್ಕೃತ ಮತ್ತು ತೆಲುಗುಗಳಲ್ಲಿ ಪಾಂಡಿತ್ಯವಿದ್ದವರು. ಎಂವಿಸೀ ಅವರ ತಂದೆ ವೆಂಕಟದಾಸಪ್ಪನವರು ಮೈಸೂರು ಅರಮನೆಯಲ್ಲಿ ಕೆಲಸಕ್ಕಿದ್ದು ಸನಿಹವೇ ಇದ್ದ ಅಗ್ರಹಾರದಲ್ಲಿ ವಾಸಿಸುತ್ತಿದ್ದರು. ತಂದೆ ಬರಹಗಾರರಲ್ಲದಿದ್ದರೂ ಸಾಹಿತ್ಯಾಸಕ್ತಿಯಿದ್ದವರು. ಎಂವಿಸೀ ಚಿಕ್ಕವರಾಗಿದ್ದಾಗ ಅವರ ತಂದೆ ವಿದ್ವಾಂಸರೊಬ್ಬರಿಂದ ವಾಲ್ಮೀಕಿ ರಾಮಾಯಣ ಪಾರಾಯಣವನ್ನು ಮಾಡಿಸಿದರಂತೆ. ಅಲ್ಲದೆ ಅವರು ಆ ಕಾಲದಲ್ಲಿ ಸುಪ್ರಸಿದ್ಧವಾಗಿದ್ದ ದೇವಶಿಖಾಮಣಿ ಅಳಸಿಂಗರಾಚಾರ್ಯರು ಅನುವಾದಿಸಿದ್ದ ವಾಲ್ಮೀಕಿ ರಾಮಾಯಣದ ಕನ್ನಡ ಸಂಪುಟಗಳನ್ನು ತರಿಸಿಕೊಂಡಿದ್ದರು. ಇವನ್ನೆಲ್ಲ ಕಿರಿ ವಯಸ್ಸಿನಲ್ಲಿಯೇ ಸೀತಾರಾಮಯ್ಯನವರು ಓದಿದ್ದರು. ಅವರ ಮನೆಯಲ್ಲಿ ಅವರ ದೊಡ್ಡಪ್ಪನ ಮಗನೊಬ್ಬ ಓದಿಕೊಂಡಿದ್ದನಂತೆ. ಅವನು ಹೈಸ್ಕೂಲು ವಿದ್ಯಾರ್ಥಿ, ಬುದ್ಧಿವಂತ. 'ವಿಕಟ ವಿನೋದಿನಿ'ಯಂತಹ ನಿಯತಕಾಲಿಕ, ಎಂ.ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹಾರಾಯ'ದಂತಹ ಕಾದಂಬರಿ ಮುಂತಾದ ಪುಸ್ತಕಗಳನ್ನು ತಂದು ಇವರ ತಾಯಿಯ ಮುಂದೆ, ಕೆಲವೊಮ್ಮೆ ನಾಟಕೀಯವಾಗಿ ಓದುತ್ತಿದ್ದನಂತೆ. ಜೊತೆಗೆ ಇವರ ಸೋದರತ್ತೆ ಹರಿಕತೆ, ಬಯಲಾಟಗಳಿಗೆ ಇವರನ್ನು ಕರೆದೊಯ್ಯುತ್ತಿದ್ದರು. ತಂದೆ–ಯೂ ಆಗಾಗ್ಗೆ ಹರಿಕಥಾಸಪ್ತಾಹಗಳನ್ನು ನಡೆಸುತ್ತಿದ್ದರು. ಹಿರಿಯರು ಸೇರಿ ಮನೆಯಲ್ಲಿ ಪ್ರತಿ ಶನಿವಾರ ಭಜನೆ ಮಾಡುತ್ತಿದ್ದರು. ವಂಶದ ಹಿಂದಿನವರು ರಚಿಸಿದ್ದ ಹಾಡುಗಳನ್ನು ಹಾಡುವ ಪರಿಪಾಟವೂ ಇತ್ತು. ಹೀಗೆ ಮನೆಯಲ್ಲಿ ಸಾಂಸ್ಕೃತಿಕ ವಾತಾವರಣ ಹಸಿರಾಗಿದ್ದು ಬಾಲಕ ಸೀತಾರಾಮಯ್ಯನ ಮೇಲೆ ಅಪಾರ ಪ್ರಭಾವ ಬೀರಿತು.

**ಮುಂದುವರಿಯುವುದು**

# ಹಿರಿಯ ಸಾಹಿತಿ ಹಾಗೂ ಬಿಎಂ ಶ್ರೀ ಪ್ರತಿಷ್ಠಾನದ ನಿವೃತ್ತ ಗೌರವ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ನಿಧನ

## ೨೪-೧೨-೧೯೩೧ - ೨೬-೦೪-೨೦೧೮



ಪ್ರಸಿದ್ಧ ಸಾಹಿತಿ ಹಾಗೂ ಬಿಎಂಶ್ರೀ ಪ್ರತಿಷ್ಠಾನದ ನಿವೃತ್ತ ಗೌರವ ಕಾರ್ಯದರ್ಶಿ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರು ೨೬-೪-೨೦೧೮ ರಂದು ನಿಧನರಾದರು.ಬಿ.ಎಂ.ಶ್ರೀ. ಪ್ರತಿಷ್ಠಾನದ ಜೊತೆ ನಿಕಟವಾದ ಮತ್ತು ದೀರ್ಘಾವದಿಯ ನಂಟು ಹೊಂದಿದ್ದ ಶ್ರೀಯುತರು ೧೯೯೨ರಿಂದ ೨೦೧೩ರವರೆಗೆ ಬಿಎಂ ಶ್ರೀ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸಕ್ರಿಯ ಸದಸ್ಯರಾಗಿದ್ದು ಪ್ರತಿಷ್ಠಾನದ ಎಲ್ಲಾ ಚಟುವಟಿಕೆಗಳಲ್ಲಿ ಭಾಗವಹಿಸಿ ಪ್ರತಿಷ್ಠಾನದ ಪ್ರಗತಿಗೆ ಅಪಾರ ಶ್ರಮ ವಹಿಸಿರುತ್ತಾರೆ.ಶ್ರೀಯುತರು೧೯೯೯ ರಿಂದ ೨೦೦೬ ರವರೆಗೆ ಪ್ರತಿಷ್ಠಾನದ ವಿದ್ವತ್ ಪತ್ರಿಕೆ 'ಕರ್ನಾಟಕ ಲೋಚನ'ದ ಸಂಪಾದಕರಾಗಿದ್ದರು.೨೦೦೩ರಲ್ಲಿ ನಡೆದ ಪ್ರತಿಷ್ಠಾನದ ರಜತ ಮಹೋತ್ಸವದ ಸ್ವಾಗತ ಸಮಿತಿಯ ಸಂಚಾಲಕರಾಗಿದ್ದರು.ನಂತರ ೨೮-೦೨-೨೦೦೬ ರಿಂದ ೨೪-೦೨-೨೦೧೪ರವರೆಗೆ ಅವರು ಪ್ರತಿಷ್ಠಾನದ ಗೌರವ ಕಾರ್ಯದರ್ಶಿಯಾಗಿದ್ದರು.ಜನವರಿ ೨೦೦೭ರಿಂದ ಅವರು ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರದ ಸಂಪಾದಕರಾಗಿ ೨೦೧೫ರವರೆಗೆ ೨೨ ಸಂಚಿಕೆಗಳನ್ನು ಹೊರತಂದಿರುತ್ತಾರೆ. ಪ್ರತಿಷ್ಠಾನದ ಆಡಳಿತವನ್ನು ಸದೃಢಗೊಳಿಸುವಲ್ಲಿ ಹಾಗೂ ಪ್ರತಿಷ್ಠಾನಕ್ಕೆ ಶಾಶ್ವತ ಅನುದಾನ ಲಭ್ಯವಾಗುವಲ್ಲಿ ಶ್ರೀ ಎಸ್. ವಿ.ಶ್ರೀನಿವಾಸರಾವ್ ಅವರು ಬಹಳಷ್ಟು ಶ್ರಮವಹಿಸಿರುತ್ತಾರೆ.ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರು ಬಿಎಂಶ್ರೀ ಪ್ರತಿಷ್ಠಾನದಲ್ಲಿ ದೀರ್ಘಕಾಲೀನ ಸುಧಾರಣೆಗಳನ್ನು ಜಾರಿಗೆ ತಂದಿರುತ್ತಾರೆ.ಪ್ರತಿಷ್ಠಾನವು ಅವರ ಆತ್ಮಕ್ಕೆ ಸದ್ಗತಿ ದೊರಕಲೆಂದು ಪ್ರಾರ್ಥಿಸುತ್ತದೆ.

### ೧೭-೫-೨೦೧೮

### ಪ್ರತಿಷ್ಠಾನದ ನಿವೃತ್ತ ಕಾರ್ಯದರ್ಶಿ ದಿವಂಗತ ಶ್ರೀ ಎಸ್.ವಿ.ಶ್ರೀನಿವಾಸರಾವ್ ಗೌರವಾರ್ಥ ಶದ್ಧಾಂಜಲಿ ಸಭೆ

ಸಾಮಾನ್ಯವಾಗಿ ಶ್ರದ್ಧಾಂಜಲಿ ಸಭೆಗಳು ಬಹಳ ಮೌನವಾಗಿ, ಗಂಭೀರವಾಗಿ ನಡೆಯುವ ಸಂದರ್ಭಗಳೇ ಹೆಚ್ಚು.ಆದರೆ ಪ್ರತಿಷ್ಠಾನದಲ್ಲಿ ದಿವಂಗತ ಶ್ರೀ ಶ್ರೀನಿವಾಸರಾಯರ ಶದ್ಧಾಂಜಲಿ ಸಭೆ, ತುಸು ಭಿನ್ನವಾಗಿತ್ತು. ಸಭೆಯು ದಿವಂಗತರ ಸಾಕ್ಷ್ಯಚಿತ್ರ ಪ್ರದರ್ಶನ ಮೂಲಕ ಪ್ರಾರಂಭವಾಯಿತು, ಒಂದು ಖಾಸಗೀ ಟಿವಿ ಸಂಸ್ಥೆಯು ತಯಾರಿಸಿರುವ ಶ್ರೀ ಶ್ರೀನಿವಾಸರಾಯರ ಪರಿಚಯ, ಜೀವನ, ಸಾಧನೆಗಳು, ಸಾರಸ್ವತ ಲೋಕಕ್ಕೆ ಅವರ ಕೊಡುಗೆಗಳು, ಅವರ ಸಂಘಟನಾ ಚತುರತೆ, ಕುಟುಂಬವರ್ಗದವರ ಅನಿಸಿಕೆಗಳು, ಅವರ ಒಡನಾಟ, ಹೀಗೆ ಹಲವಾರು ವಿಷಯಗಳನ್ನೊಳಗೊಂಡ ಸಾಕ್ಷ್ಯಚಿತ್ರ ನಿಜವಾಗಿಯೂ ಸೊಗಸಾಗಿ ಮೂಡಿಬಂದಿತು. ಇಂಚರ ಟಿವಿಯ ಈ ಕೊಡುಗೆ ಶ್ಲಾಘನೀಯ.

ನುಡಿನಮನ ಕಾರ್ಯಕ್ರಮದಲ್ಲಿ, ಮೊದಲಿಗೆ ಡಾ. ಪಿ.ವಿ. ನಾರಾಯಣ ಅವರು ಬಿಎಂಶ್ರೀ ಪ್ರತಿಷ್ಠಾನವನ್ನು ಕಟ್ಟುವಲ್ಲಿ ಶ್ರೀ ಶ್ರೀನಿವಾಸರಾಯರ ಕೊಡುಗೆ ಬಹಳವಿತ್ತು ಎಂದು ಹೇಳಿ ಸಭೆಗೆ ಎಲ್ಲರನ್ನೂ ಸ್ವಾಗತಿಸಿದರು.

ಪ್ರತಿಷ್ಠಾನದ ಹಿರಿಯ ಸದಸ್ಯ ಶ್ರೀ ವೆಂಕಟರಮಣಯ್ಯ ಅವರು ತಮ್ಮ ಸುದೀರ್ಘ ಕಾಲದ ಒಡನಾಟವನ್ನು ನೆನಪಿಸಿಕೊಂಡು ಶ್ರೀ ಶ್ರೀನಿವಾಸರಾಯರ ಪ್ರಾಮಾಣಿಕತೆ, ಅವರ ಶಿಸ್ತು ಮತ್ತು ಸಮಯ ಪ್ರಜ್ಞೆ ಬಗ್ಗೆ ತಿಳಿಸಿದರು. ದಿವಂಗತರ ಬಾಲ್ಯದ ಗೆಳೆಯರಾದ ಶ್ರೀ ಧೀರೇಂದ್ರ ಅವರು, ಶ್ರೀನಿವಾಸರಾಯರ ಸಮಯ ಪ್ರಜ್ಞೆ ಮತ್ತು ಬಾಲ್ಯದಿಂದಲೂ ಕಥೆ, ಕವನ, ಸಾಹಿತ್ಯಾಸಕ್ತಿಗಳ ನೆನಪಿನ ಸುರುಳಿಯನ್ನು ಬಿಚ್ಚಿ ಬಹಳ ಭಾವುಕರಾಗಿ ಮಾತನಾಡಿದರು.

ಅವರಲ್ಲಿ ನಿರುತ್ಸಾಹ ಕಾಣಲು ಸಾಧ್ಯವಿರಲಿಲ್ಲ ಎಂದು ಹೇಳಿದ ಕನ್ನಡ ಗೆಳೆಯರ ಬಳಗದ ಅಧ್ಯಕ್ಷ ಶ್ರೀ ರಾ.ನಂ.ಚಂದ್ರಶೇಖರ್ ಅವರು ಅವರೊಂದಿಗಿನ ತಮ್ಮ ಒಡನಾಟವನ್ನು ನೆನಪಿಸಿಕೊಂಡರು.

ಐದುದಶಕಗಳಿಗೂ ಮೀರಿದ ಅವರೊಂದಿಗಿನ ಒಡನಾಟವನ್ನು ಪ್ರೊ.ಜಿ. ಅಶ್ವತ್ಥನಾರಾಯಣ ಅವರು ನೆನಪಿಸಿಕೊಂಡು, ಅಖಿಲ ಕರ್ನಾಟಕ ಮಕ್ಕಳ ಸಾಹಿತ್ಯ ಸಮ್ಮೇಳನವನ್ನು ಆಯೋಜಿಸುವಲ್ಲಿ ಮತ್ತು ಅವರ ಸಂಘಟನಾ ಕೌಶಲ್ಯವನ್ನು ಸ್ಮರಿಸಿಕೊಂಡು ತಮ್ಮ ಶ್ರದ್ಧಾಂಜಲಿ ಸಲ್ಲಿಸಿದರು.ಮಾಹಿತಿಗಳ ಸಂಗ್ರಹ, ಸಂಗ್ರಹಗಳ ವೈಶಿಷ್ಟ್ಯತೆ ಈ ವಿಷಯಗಳಲ್ಲಿನ ಅವರ ಅಪಾರ ಶ್ರದ್ಧೆ, ಬದ್ಧತೆ, ಪ್ರಾಮಾಣಿಕತೆ ಅನುಕರಣೀಯವೆಂದು ಅಭಿಪ್ರಾಯಪಟ್ಟರು.ಡಾ. ರಮಾದೇವಿ ವಿಶ್ವೇಶ್ವರಯ್ಯ ಅವರು ಶ್ರೀ ಶ್ರೀನಿವಾಸರಾಯರು ತೋರಿಸುತ್ತಿದ್ದ ಸೌಜನ್ಯ ಹಾಗೂ ಆದರಗಳನ್ನು ನೆನಪಿಸಿಕೊಂಡು ಅವರು ಎಲ್ಲರಿಗೂ ಮಾದರಿಯಾಗಿದ್ದರು ಎಂದು ಅಭಿಪ್ರಾಯಪಟ್ಟರು.

ನಾಡೋಜ ಪ್ರೊ॥ ಎಂ.ಎಚ್.ಕೃಷ್ಣಯ್ಯನವರು ಶ್ರೀ ಶ್ರೀನಿವಾಸರಾಯರ ಸೌಜನ್ಯತೆಯನ್ನು ನೆನಪುಮಾಡಿಕೊಂಡರು.ಕನ್ನಡ ಸಾಹಿತಿ ದರ್ಶನ ಮಾಹಿತಿಕೋಶಕ್ಕೆ ಅವರ ಕೊಡುಗೆಯನ್ನು ಕೆಲವು ಸೋದಾಹರಣದೊಂದಿಗೆ ತಿಳಿಸಿದರು.ಶ್ರೀನಿವಾಸರಾಯರು ತಮಗೆ ಆಶ್ಚರ್ಯ, ವಿಸ್ಮಯ ಮತ್ತು ಒಗಟಾಗಿ ಕಂಡ ಪರಿಯನ್ನು ಹಂಚಿಕೊಂಡು.ರೇಡಿಯೋ ಮತ್ತು ದೂರದರ್ಶನಕ್ಕಾಗಿ




ಅವರು ಕೆಲವು ಬಾನುಲಿ ರೂಪಕಗಳನ್ನು ರಚಿಸಿದ ಬಗ್ಗೆ ಮಾಹಿತಿ ನೀಡಿದರು.

ಡಾ॥ ವಿಜಯಾ ಸುಬ್ಬರಾಜ್ ಅವರು ಪ್ರತಿಷ್ಠಾನದಲ್ಲಿ ಶ್ರೀನಿವಾಸರಾಯರೊಂದಿಗಿನ ತಮ್ಮ ಒಡನಾಟವನ್ನು ನೆನಪಿಸಿಕೊಂಡು ನುಡಿನಮನ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಶ್ರೀನಿವಾಸರಾಯರ ಕುಟುಂಬವರ್ಗದವರಿಗೂ, ಕಾರ್ಯಕ್ರಮಕ್ಕೆ ಆಗಮಿಸಿದ್ದ ವಿದ್ವಾಂಸರೆಲ್ಲರಿಗೂ ವಂದನೆ ಸಲ್ಲಿಸಿದರು.

### ಕಿರುಪರಿಚಯ : ಶ್ರೀ ಎಸ್.ವಿ.ಶ್ರೀನಿವಾಸರಾವ್

ಇವರು ಶಾನುಭೋಗ ವೆಂಕಟರಾಮಯ್ಯ ಮತ್ತು ಪುಟ್ಟಚ್ಚಮ್ಮ ದಂಪತಿಗಳ ದತ್ತು ಮಗ.ಅವರ ಸ್ವಗ್ರಾಮ ತುಮಕೂರು ಜಿಲ್ಲೆ, ಗೂಳೂರು ಹೋಬಳಿಯ ಚಿಕ್ಕಸಾರಂಗಿ ಗ್ರಾಮ.ಇವರ ಜನ್ಮದಾತ ಮಾತಾಪಿತೃಗಳು ಶ್ರೀಗುಂಡಪ್ಪ (ಪುಟ್ಟಚ್ಚಮ್ಮನ ತಮ್ಮನೇ) ಮತ್ತು ಪದ್ಮಾವತಮ್ಮ. ಬಿ.ಎಸ್‌ಸಿ (೧೯೫೪) ಮತ್ತು ಎ.ಎಂ.ಐ.ಇ(ಎ) (ಕಲ್ಕತ್ತ ೧೯೬೪) ಪದವಿಗಳಿಸಿದ ಇವರು, ೧೯೫೨ರಲ್ಲಿ ರಾಷ್ಟ್ರಭಾಷಾ ವಿಶಾರದಾ ಮತ್ತು ಮುಂಬಯಿ ವಿಶ್ವವಿದ್ಯಾಲಯದಿಂದ ರಷ್ಯನ್ ಭಾಷೆಯಲ್ಲಿ ೧೯೬೬ರಲ್ಲಿ ಡಿಪ್ಲೊಮ ಪಡೆದರು. ೧೯೮೪ರಲ್ಲಿ ಎಂ.ಎ(ಕನ್ನಡ) ಪದವಿಗಳಿಸಿದರು, ಬಹುಶಃ ಇವರ ಸಾಹಿತ್ಯ ಕೃಷಿಗೆ ಪ್ರೇರಣೆ, ತುಮಕೂರಿನಲ್ಲಿ ೧೯೪೯ರಲ್ಲಿ ಹೈಸ್ಕೂಲ್ ಓದುತ್ತಿರುವಾಗ ಇವರು ಬರೆದ ಕಥೆಗೆ ಪ್ರಥಮ ಬಹುಮಾನ ಲಭಿಸಿದಾಗ ಎಂದೆನ್ನಬಹುದು. ೧೯೫೦ರಲ್ಲಿ ಇವರ ಪ್ರಥಮ ಕಥೆಯು ವಿಶ್ವಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಣೆಗೊಂಡಿತು. ಶಿವಮೊಗ್ಗದಲ್ಲಿ ಅಂತರ್ ಕಾಲೇಜು

ಕಥಾಸ್ಪರ್ಧೆಯಲ್ಲಿ ೧೯೫೩ರಲ್ಲಿ ಇವರಿಗೆ ರಜತ ಕರಂಡ ದೊರೆಕಿತು. ಇವರು ಪಂಚಭಾಷಾ ಕೋವಿದರಾಗಿದ್ದು ಅವರು ಕನ್ನಡ, ಸಂಸ್ಕೃತ, ಹಿಂದಿ, ಇಂಗ್ಲೀಷ್ ಮತ್ತು ರಷ್ಯನ್ ಭಾಷೆಗಳನ್ನು ಬಲ್ಲವರಾಗಿದ್ದರು.

ಭಾರತ ಸರ್ಕಾರದ ರಕ್ಷಣಾ ಇಲಾಖೆಯ ಘಟಕವಾದ ಬೆಂಗಳೂರಿನ CQAL ನಲ್ಲಿ ೧೯೫೫ರಲ್ಲಿ ಸೇವೆಗೆ ಸೇರಿದ ಶ್ರೀಯುತರು, ಸೈಂಟಿಫಿಕ್ ಆಫೀಸರ್ ಹುದ್ದೆಯಿಂದ ೧೯೮೯ರಲ್ಲಿ ನಿವೃತ್ತರಾದರು.

ಸುಮಾರು ಏಳು ದಶಕಗಳಿಂದಲೂ ಸಾಹಿತ್ಯ ವ್ಯವಸಾಯದಲ್ಲಿ ನಿರತರಾಗಿದ್ದ ಶ್ರೀನಿವಾಸರಾಯರು, ಸಾಮಾಜಿಕ ಕಾದಂಬರಿ, ವೈಜ್ಞಾನಿಕ ಕಾದಂಬರಿ, ಚಾರಿತ್ರಿಕ ಕಾದಂಬರಿ, ಮಕ್ಕಳ ಕಾದಂಬರಿ, ಪ್ರವಾಸಕಥನ ಮುಂತಾದ ಎಲ್ಲಾ ಪ್ರಕಾರಗಳಲ್ಲಿಯೂ ೧೫೬ ಪುಸ್ತಕಗಳನ್ನು ರಚಿಸಿರುತ್ತಾರೆ. ಇವರ ಕಾದಂಬರಿಗಳೆಲ್ಲವೂ ಪತ್ರಿ-ಕೆ ಮತ್ತು ನಿಯತಕಾಲಿಕೆಗಳಲ್ಲಿ ಪ್ರಕಟಣೆಗೊಂಡು, ನಂತರ ಪುಸ್ತಕ ರೂಪದಲ್ಲಿಯೂ ಹೊರಬಂದಿದೆ.ಇವರ ಚಾರಿತ್ರಿಕ ಕಾದಂಬರಿ ಪ್ರೌಢಪ್ರತಾಪ ವೀರರಾಜೇಂದ್ರ, ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ೨೦೦೩ರಲ್ಲಿ ಮರುಮುದ್ರಣವೂ ಕಂಡಿದೆ.ಮಕ್ಕಳಿಗಾಗಿ ಹದಿನೆಂಟು ಮಕ್ಕಳ ಪುಸ್ತಕಗಳನ್ನೂ, ನಾಲ್ಕು ವ್ಯಕ್ತಿಚಿತ್ರಗಳನ್ನು ಮಕ್ಕಳಿಗಾಗಿಯೇ ರಚಿಸಿದ್ದಾರೆ-ಡಿವಿಜಿ, ಕೊಡಗಿನ ವೀರರಾಜೇಂದ್ರ, ಮತ್ತು ದುರ್ವಿನೀತ. ಎಂಟು ಅನುವಾದ ಕೃತಿಗಳನ್ನು ರಚಿಸಿದ್ದಾರೆ.ನ್ಯಾಷನಲ್ ಬುಕ್ ಟ್ರಸ್ಟ್, ಕೇಂದ್ರ ಸಾಹಿತ್ಯ ಅಕಾಡೆಮಿಗಳೂ ಇವುಗಳನ್ನು ಪ್ರಕಟಿಸಿವೆ. ಮಾಹಿತಿ ಸಂಗ್ರಹ ಮತ್ತು ಅವುಗಳನ್ನು ಕ್ರೋಢೀಕರಿಸುವಿಕೆಯಲ್ಲಿ ಇವರ ಶ್ರಮ ಮತ್ತು ನೈಪುಣ್ಯತೆ ಎಲ್ಲರೂ ಮೆಚ್ಚತಕ್ಕದ್ದು ಮತ್ತು ಅನುಕರಣೀಯ.ಇವರ 'ಕನ್ನಡ ಸಾಹಿತಿ ದರ್ಶನ'ವೇ ಇದಕ್ಕೆ ಉತ್ತಮ ಉದಾಹರಣೆ.ಮಾಹಿತಿ ಸಂಗ್ರಹ, ಕ್ರೋಡೀಕರಿಸುವ ವಿಧಾನ, ಓದುಗರಿಗೆ ನೀಡುವ ರೀತಿ, ಅವುಗಳ ಹಿಂದಿರುವ ಶ್ರಮ ಎಲ್ಲವನ್ನೂ ಈ ಕೃತಿಯಲ್ಲಿ ಕಾಣಬಹುದು.ಈ ಕೃತಿಯು ೧೫೦೦ಕ್ಕೂ ಹೆಚ್ಚಿನ ಪ್ರಾಚೀನ/ ಅರ್ವಾಚೀನ ಸಾಹಿತಿಗಳ ಕಿರುಪರಿಚಯದ ಹೊತ್ತಿಗೆ.೧೯೮೯ರಲ್ಲಿ ಡಾ|| ಕುವೆಂಪು ಬಿಡುಗಡೆ ಮಾಡಿದ ಈ ಕೃತಿ, ೨೦೦೮ರಲ್ಲಿ ಪರಿಷ್ಕೃತ-ವಿಸ್ಕೃತ ಆವೃತ್ತಿಯ ಬಿಡುಗಡೆಯಾಯಿತು.

ಅನೇಕ ಸಂಘ, ಸಂಸ್ಥೆಗಳಲ್ಲಿ ಗೌರವ ಹುದ್ದೆಗಳನ್ನು ಅಲಂಕರಿಸಿದ್ದ ಶ್ರೀಯುತರು ಹಲವಾರು ಪ್ರಶಸ್ತಿ ಸನ್ಮಾನ ಮತ್ತು ಗೌರವಗಳಿಗೂ ಪಾತ್ರರಾಗಿದ್ದಾರೆ. ನವೆಂಬರ್ ೧೯೯೫ರಲ್ಲಿ 'ಸೌರಭಶ್ರೀ' ಎಂಬ ಅಭಿನಂದನಾ ಗ್ರಂಥವು ಶ್ರೀಯುತರಿಗೆ ಸಮರ್ಪಣೆಗೊಂಡಿದೆ.ದೇಶಿಯ ಮತ್ತು ಅಂತಾರಾಷ್ಟ್ರೀಯ ಪ್ರವಾಸಗಳನ್ನು ಕುಟುಂಬ ವರ್ಗದವರೊಂದಿಗೆ ಕೈಗೊಂಡಿರುವ ಶ್ರೀಯುತರು ಪ್ರವಾಸ ಪ್ರಿಯರಾಗಿದ್ದರು.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2018-2020
dt. 27-10-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 31-05-2018

## ೨೦೧೮ ಮೇ ತಿಂಗಳಿನಲ್ಲಿ ಗ್ರಂಥಾಲಯ ಮತ್ತು ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಪ್ರಸ್ತುತ ಗ್ರಂಥಾಲಯದಲ್ಲಿರುವ ವಿವಿಧ ಹಳೇ ವಿದ್ವತ್ ಪತ್ರಿಕೆಗಳನ್ನು (ನಿಯತಕಾಲಿಕೆಗಳು) ಗುರುತಿಸಿ, ಸಂಪುಟ/ ಸಂಚಿಕೆವಾರು ಕ್ರೋಡೀಕರಿಸುವ ಕಾರ್ಯವು ಸಾಗುತ್ತಿದೆ. ಇಲ್ಲಿ ಲಭ್ಯವಿರುವ ನಿಯತಕಾಲಿಕೆಗಳ ಪಟ್ಟಿಯನ್ನು ಗ್ರಂಥಪಾಲಕರ ಬಳಿಯೂ ಇಡಲಾಗುವುದು. ಪ್ರತಿಷ್ಠಾನದ ವತಿಯಿಂದ ಎಂ.ಫಿಲ್ ಮತ್ತು ಪಿಎಚ್.ಡಿ.ಪದವಿ ಪಡೆದವರ ಮಹಾಪ್ರಬಂಧಗಳನ್ನು ವರ್ಷಾವಾರು ವಿಂಗಡಿಸಿ, ಜೋಡಿಸಿ ಇಡಲಾಗಿದೆ. ಇದರ ಪಟ್ಟಿಯೂ ಸಹ ಗ್ರಂಥಾಲಯದಲ್ಲಿ ಲಭ್ಯವಿರುತ್ತದೆ.

### ಹಸ್ತಪ್ರತಿ ವಿಭಾಗ

ಶ್ರೀಮತಿ ವಾರಿಜ ಅಡಿಗ , ಶ್ರೀ ತಮ್ಮಣ್ಣ ಅಡಿಗ, ಉಡುಪಿ ಇವರುಗಳು ಪ್ರತಿಷ್ಠಾನದ ಹಸ್ತಪ್ರತಿ ಸಂಗ್ರಹಾಲಯಕ್ಕೆ ೨೩ ತಾಳೆಗರಿ ಗ್ರಂಥಗಳನ್ನು ಕೊಡುಗೆಯಾಗಿ ನೀಡಿದ್ದಾರೆ. ಇವರ ಗ್ರಂಥದಾನವನ್ನು ಕೃತಜ್ಞತಾ ಪೂರ್ವಕವಾಗಿ ಸ್ವೀಕರಿಸಿ ಅವರಿಗೆ ವಂದನೆಗಳನ್ನು ತಿಳಿಸುತ್ತೇವೆ. ಈ ಗ್ರಂಥಗಳ ಸಂರಕ್ಷಣಾ ಕಾರ್ಯ ಪ್ರಾರಂಭವಾಗಿದೆ.




ಎ೨೦೧೮ ಏಪ್ರಿಲ್ ದಿನಾಂಕ ೬-೪-೨೦೧೮ರಂದು ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆಯ ವರದಿಗಾರರಾದ ಶ್ರೀ ಪುಷ್ಕರ್ ಅವರು ನಮ್ಮ ಪ್ರತಿಷ್ಠಾನಕ್ಕೆ ಭೇಟಿನೀಡಿ, ನಮ್ಮ ಪ್ರತಿಷ್ಠಾನದ ಹಸ್ತಪ್ರತಿ ಭಂಡಾರವನ್ನು ಕುರಿತಂತೆ ಒಂದು ಛಾಯಾ ಚಿತ್ರಾಂಕಣ (photo feature)ವನ್ನು ತಮ್ಮ ದಿನಾಂಕ ೧೨-೪-೨೦೧೮ರ ದಿನಪ್ರತಿಕೆಯಲ್ಲಿ ಪ್ರಕಟಿಸಿದ್ದಾರೆ. ಇದರ ಸಂಕ್ಷಿಪ್ತ ರೂಪವನ್ನು ಇಲ್ಲಿ ಪ್ರಕಟಿಸಲಾಗಿದೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ-ಅಂಚೆ

ಶ್ರೀಮತಿ/ಶ್ರೀ......................................................................................

......................................................................................

......................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭